ಜೂನ್ 2000 ರೂ. 10



ತಮಾನದ ಬರ

ಬಿಸಿಲ

# ಸುಂದರಿಯರ ಬೀಡಲ್ಲಿ ಕೋಲಾಹಲ!

ಕರ್ನಾಟಕ ರಾಜಕೀಯ : ಸ್ಫೋಟಕ ಸತ್ಯಗಳು !

ಟ್ರಾಫಿಕ್ ಜಾಮ್ : ಪರಿಹಾರ ?

ಇವರೇನಾ ಆ ಫೋರ್ಪಡೆ !

ಅಸ್ತಮಾ : ಸಂಪೂರ್ಣ ವಿವರ



ಅಳುವ ಗಂಡಸನ್ನು ನಂಬಬೇಕೆ?

ಅಂಕುರ

ಜೂನ್ 2000 ಸಂಪುಟ 3 ಸಂಚಿಕೆ 12

- ಕನಸುಗಳು ವಾಸ್ತವವಾಗಬಹುದು. ನಮ್ಮನ್ನು ಕೈಹಿಡಿದು ನಡೆಸುತ್ತಾ ಸುಖದೆಡೆಗೆ ಕೊಂಡೊಯ್ಯುವ ಸಾಧನ ಅವನವನ ಕನಸು.

  -ಡೆಬೋರಾ ನಾರ್ವೆಲ್

- ದುಡ್ಡು ದ್ವಿಗುಣಗೊಳಿಸುವ ಒಂದೇ ದಾರಿ ಎಂದರೆ ನೋಟು ಮಡಿಸಿ ಇರಿಸಿಕೊಂಡು ಒಂದೊಂದು ನೋಟನ್ನೂ ಎರಡೆರಡು ಬಾರಿ ಎಣಿಸುವುದು.

  - ಅನಾಮಿಕ

- ಕೆಲವು ಸಂಗತಿಗಳು ಆಕಸ್ಮಿಕವಾಗಿ ನಡೆಯುತ್ತವೆ ಎಂದು ನಾನು ನಂಬುವುದಿಲ್ಲ. ಎಲ್ಲವನ್ನೂ ನಾವಾಗಿ ತಂದುಕೊಳ್ಳುತ್ತೇವೆ.

  - ಮ್ಯಾಡಲೀನ್ ಆಲ್‌ಬ್ರೈಟ್

- ಎಲ್ಲಕ್ಕಿಂತ ತನ್ನ ಮೇಲೇ ನಿಯಂತ್ರಣ ಸಾಧಿಸುವುದು ಬಹುದೊಡ್ಡ ಗೆಲುವು. ಇದು ಅರ್ಥವಾದವರಿಗೆ ಸೋಲೆಂಬುದು ಇರದು.

  - ಎ.ಜೆ.ಕ್ರೋನಿನ್

ಸಂಪಾದಕ
ಚಂದ್ರಕಾಂತ ವಡ್ಡು

ಕಾರ್ಯ ನಿರ್ವಾಹಕ ಸಂಪಾದಕ
ಎಂ.ಎಲ್.ದೇಶಿಕರ್

ಉಪ ಸಂಪಾದಕ
ಎಚ್.ಆರ್. ವಸ್ತ್ರದ

ನಿರ್ವಹಣೆ
ಸಿದ್ದಪ್ಪ ವೈ. ಕಬ್ಬೂರ

ಅಕ್ಷರ ಜೋಡಣೆ
ಪ್ರಕಾಶ ಎಂ. ವಾಲಿ
ವಿ. ಕೋಕಿಲ

ಕಲೆ
ವಸಂತ ಹೊಸಬೆಟ್ಟು

Printed, Published and Owned by Chandrakanta Vaddu, 552, 15th Main, 3rd Stage, 4th Block, Water Tank Road, Basaveshwaranagar, Bangalore-560 079. Tel : 080 3227810 Email:Ankura@rediffmail.com Pager No : 9622 738638 Mobile:98440 87433 Editor : Chandrakanta Vaddu

# ಎಲ್ಲಿಗೆ ?

ಆ ಊರಲ್ಲಿ ಎರಡು ಝೆನ್ ಮಠಗಳಿದ್ದವು. ಅಲ್ಲಿನ ಗುರುಗಳಿಗೆ ಸೌಹಾರ್ದದ ಸಂಬಂಧ ಇತ್ತು. ಅದು ಸಹಜ. ಆದರೆ ಅಲ್ಲಿ ಕಲಿಯುವ ಹುಡುಗರಿಗೆ ಮಾತ್ರ ತಲೆಯಲ್ಲಿ ಒಂದೇ ಕೊರೆತ. ತಮ್ಮ ಮಠವೇ ಶ್ರೇಷ್ಠ. ಇನ್ನೊಂದು ಮಠದವರನ್ನು ಸಮಯ ಸಿಕ್ಕಾಗಲೆಲ್ಲ ಹೇಗಾದರೂ ಮಾಡಿ ಬಗ್ಗು ಬಡಿಯಬೇಕು.

ಒಂದು ದಿನ ಪೇಟೆಯಲ್ಲಿ ಆ ಮಠದ ಶಿಷ್ಯನೊಬ್ಬ, ಈ ಮಠದವನಿಗೆ ಎದುರಾದ. ಇದೊಳ್ಳೇ ಅವಕಾಶ. ಮಾತಲ್ಲಿ ಇವನನ್ನು ಕಟ್ಟಿಹಾಕಬೇಕು ಅಂದು ಕೊಂಡ. ಸಂಜೆ ಸಮಯ. ತಾನು ಮಠಕ್ಕೆ ತರಕಾರಿ ತರಲು ಬಂದಿದ್ದೇನೆ. ಇವನೋ ಕೈಬೀಸಿಕೊಂಡು ಹೊರಟಿದ್ದಾನೆ. ಎಲ್ಲಿಗೆ? ಅಂತ ಕೇಳಬೇಕು. ಹೀಗೆ ಅಂದ ಕೂಡಲೇ ಮಾತಲ್ಲಿ ಸಿಕ್ಕು ಹಾಕಿಸಿಕೊಂಡು ಇದೇನಾ ನಿಮ್ಮ ಮಠದವರು ಕಲಿಸೋದು? ಎಂದೆಲ್ಲ ಹೀಯಾಳಿಸಬೇಕು ಅಂದುಕೊಂಡ. ಕೇಳಿದ.

'ಎಲ್ಲಿಗಯ್ಯ ಹೊರಟಿದ್ದು?'

'ಬೀಸುತ್ತಿರುವ ಗಾಳಿ ಎಲ್ಲಿಗೆ ಕರೆದೊಯ್ಯುತ್ತದೋ ಅಲ್ಲಿಗೆ' ಎಂದ ಇನ್ನೊಬ್ಬ. ಇವನಿಗೆ ಪೆಚ್ಚಾಯಿತು. ಮಠಕ್ಕೆ ಬಂದು ಗುರುಗಳ ಮುಂದೆ ಪೇಚಾಡಿಕೊಂಡ. ಗುರುಗಳು ನಕ್ಕು 'ನಾಳೆಯೂ ಇದೇ ಹೊತ್ತಿಗೆ ಹೋಗು. ಖಂಡಿತಾ ಸಿಗುತ್ತಾನೆ. ಇದೇ ಪ್ರಶ್ನೇ ಕೇಳು. ಗಾಳಿ ಕರೆದೊಯ್ಯುವಲ್ಲಿಗೆ ಅನ್ನುತ್ತಾನೆ ಅಲ್ಲವೇ?' ಎಂದು, ಹಾಗೆ ಉತ್ತರಿಸಿದರೆ ಏನು ಹೇಳಬೇಕು ಎಂದೆಲ್ಲ ವಿವರಿಸಿದರು.

ಮರುದಿನ ಹಾಗೇ ಮಾಡಿದ. ಅದೇ ಇಬ್ಬರು. ಅದೇ ಪ್ರಶ್ನೆ. ಉತ್ತರ ಬೇರೆಯಾಗಿತ್ತು.

'ಕಾಲುಗಳು ಎಲ್ಲಿಗೆ ಕೊಂಡೊಯ್ಯುತ್ತವೆಯೋ ಅಲ್ಲಿಗೆ' ಅಂದುಬಿಟ್ಟ. ಗುರುಗಳು ಹೇಳಿಕೊಟ್ಟದ್ದು ಬೇರೆ. ಇಲ್ಲಿ ಈ ಯಬಡ ಬೇರೆ ಉತ್ತರ ಹೇಳುತ್ತಿದ್ದಾನೆ. ಅವನನ್ನು ಪೇಚಿಗೆ ಸಿಕ್ಕಿಸಲು ಸಾಧ್ಯವಾಗದೇ ಮರಳಿ ಮಠಕ್ಕೆ ಬಂದು ಗುರುಗಳಿಗೆ ವರದಿ ಒಪ್ಪಿಸಿದ.

ಸರಿ. ಮತ್ತೆ ಹೇಗೂ ನಾಳೆ ಸಿಗುತ್ತಾನೆ. ಇದೇ ಪ್ರಶ್ನೆ. ಇದೇ ಉತ್ತರ. ಆಗ ಹೇಗೆ ಮಾತಾಡಬೇಕು ಎಂದು ಕಳ್ಳ ನಗೆ ನಕ್ಕು ಗುರುಗಳು ಹೇಳಿಕೊಟ್ಟರು.

ಮಾರನೇ ದಿನ ಅದೇ ಭೇಟಿ.

'ಎಲ್ಲಿಗಯ್ಯ ಇವತ್ತು?' ಜಂಭದಿಂದ ಕೇಳಿದ.

'ತರಕಾರಿ ತರಲು ಮಾರ್ಕೆಟ್‌ಗೆ ಹೊರಟಿದೀನಿ'

ಉತ್ತರಿಸಿದ ಅವನು.

ಬದುಕು ಯಾವತ್ತೂ ಒಂದೇ ರೀತಿ ಇರದು ಅಲ್ಲವೇ?

ಆಯಾ ಸನ್ನಿವೇಶಗಳಿಗೆ, ಆಗಾಗಲೇ ಉತ್ತರ ಹುಡುಕಿಕೊಳ್ಳಬೇಕಾಗುತ್ತವೆ.

ಏಕವರ್ಣದವರ್ಣನೀಯ ಶಾಂತಿಯ ತಂತಿ<br>
ಮೀಟುತಿರೆ ಅಲ್ಲಲ್ಲಿ ಹಸುರು ಬೆರಳು<br>
ದೇವಲೋಕದ ಪಕ್ಷಿ ಬಂದು ಕೊಂಕಲು ಕೊರಳು<br>
ಅರಳುವುದು ಮಂದಾರಗೀತದುರುಳು.

■ ಗೋಪಾಲಕೃಷ್ಣ ಅಡಿಗ

# ಟಪಾಲು

### ಸಮಯೋಚಿತ ಲೇಖನ

ಮೇ ಸಂಚಿಕೆಯ 'ಬಿಸಿಲ ಬದುಕು' ಪತ್ರಿಕೆಯು ಆಕರ್ಷಕ ಮತ್ತು ವರ್ಣರಂಜಿತ ಮುಖಪುಟವನ್ನು ಹೊಂದಿತ್ತು. ಪತ್ರಿಕೆಯ ಒಡಲಲ್ಲಿ ಪ್ರಕಟವಾದ 'ಪರ್ಯಾಯ ಸಾಹಿತ್ಯ ಸಮ್ಮೇಳನ ಬೇಕೇ?' ಎಂಬ ವಿಶೇಷ ಲೇಖನ ಸಮಯೋಚಿತವಾಗಿದೆ. ಈ ಸಂದರ್ಭದಲ್ಲಿ 'ಬದುಕು' ನಾಡಿನ ಗಣ್ಯ ಸಾಹಿತಿಗಳ ಮುಂದೆ ಸೂಕ್ತ ಪ್ರಶ್ನೆಗಳನ್ನು ಮಂಡಿಸಿ, ಅವರಿಂದ ಬಂದ ಪ್ರತಿಕ್ರಿಯೆಗಳನ್ನು ಪ್ರಕಟಿಸುವ ಮೂಲಕ ತನ್ನ ಓದುಗರ ಸಂಖ್ಯೆಯನ್ನು ಹೆಚ್ಚಿಸಿಕೊಂಡಿದೆ.

-ಪ್ರ.ದೈವಜ್ಞಾಚಾರ್ಯ,
ಸಾಸ್ವೇಹಳ್ಳಿ

### ಕುತೂಹಲಕಾರಿ ಲೇಖನ

ಮೇ ತಿಂಗಳ 'ಬದುಕು'ದಲ್ಲಿ ಪ್ರಕಟವಾದ 'ಡಾಟ್‌ಕಾಮ್ ಇದೇನಿದು?' ಎಂಬುದು ಒಂದು ಅತ್ಯಂತ ಕುತೂಹಲಕಾರಿ ಲೇಖನವಾಗಿ ಮೂಡಿ ಬಂದಿದೆ.

ಇಂದಿನ ವೈಜ್ಞಾನಿಕ ಯುಗದಲ್ಲಿ ಸಾಫ್ಟ್‌ವೇರ್‌ನಂತಹ ಆಧುನಿಕ ತಂತ್ರಜ್ಞಾನದ ಬಳಕೆ ಹಾಗೂ ಮಾಹಿತಿಯನ್ನು ಯುವಕರಿಗೆ ಮತ್ತು ಸಣ್ಣ ಉದ್ಯಮಿಗಳಿಗೆ ಅತೀ ಸುಲಭವಾಗಿ ತಿಳಿಸುವ ದರ್ಶನವಾಗಿದೆ ಎನ್ನುವುದರಲ್ಲಿ ಏನೂ ಅಭ್ಯಂತರವಿಲ್ಲ.

-ಬಿ.ಪಿ. ಚಿಕ್ಕಣ್ಣನವರ, ನವಲಗುಂದ

### ಬೇಸಿಗೆಯಲ್ಲಿ ತಂಪು ನೀಡಿದ ಬದುಕು

ಟಾಲ್‌ಸ್ಟಾಯ್ ಹೇಳಿದ ಮಕ್ಕಳ ಕತೆಗಳು ಅತ್ಯಂತ ನೀತಿ ಬೋಧಕವಾಗಿವೆ. 'ಡಾಟ್ ಕಾಮ್'ದ ಸಾಧಕ - ಬಾಧಕಗಳನ್ನು ಬಿಚ್ಚು ಮನಸ್ಸಿನಿಂದ ಲೇಖನದಲ್ಲಿ ವಿವರಿಸಲಾಗಿದೆ. ಕನಸಿನ ಕನ್ಯೆಯಾಗಿಯೇ ಉಳಿದ ಭಯೋತ್ಪಾದಕರ ನಾಡು ಕಾಶ್ಮೀರದ ಬಗ್ಗೆ ಓದಿ ದುಃಖವಾಯಿತು.

ನಿದ್ದೆಯ ಕುರಿತು ವಿಚಾರಪೂರ್ಣ ಲೇಖನ ನನಗೆ ಹಿಡಿಸಿತು.

ಬಿಹಾರದ ಕಿಲಾಡಿ ಜೋಡಿ ಲಾಲೂ ರಾಬಡಿ ಬಗ್ಗೆ ಅವರ ಕುತಂತ್ರ ನೀತಿಯ ಕುರಿತು ದೌರ್ಜನ್ಯದ ಅಂತಿಮ ಹಂತ ಮುಟ್ಟಿದ ಅವರಿಗೆ ಶಿಕ್ಷೆ ಇಲ್ಲದೇ ಇದ್ದುದು ನಾಚಿಕೆ ತರಿಸಿದೆ. ಪತ್ರಿಕೆಗೆ ನನ್ನ ಮನಃಪೂರ್ವಕ ಧನ್ಯವಾದಗಳು.

-ಬಸವರಾಜ ಚ. ಕರಕರಡ್ಡಿ.
ಧಾರವಾಡ

### ಸಾಹಿತ್ಯ ಸಮ್ಮೇಳನ : ಒಂದು ಚಿಂತನೆ

ಸಾಹಿತ್ಯ ಸಮ್ಮೇಳನದ ಮೇ ಸಂಚಿಕೆ ಸಮೀಕ್ಷೆ ಚೆನ್ನಾಗಿ ಮೂಡಿ ಬಂದಿದೆ. ಬದುಕಿನ ಸಾಹಸಕ್ಕೆ ಅಭಿನಂದನೆಗಳು.

ಸಾಹಿತ್ಯ ಸಮ್ಮೇಳನದ ಬಗೆಗಿನ ಗೌಜುಗದ್ದಲ ಹಾಗೂ ಒಟ್ಟಾರೆಯಾಗಿ, ಇವುಗಳ ಅನೌಚಿತ್ಯವನ್ನೇ ಕುರಿತು ಮೂರ್‍ನಾಲ್ಕು ವರ್ಷದ ಹಿಂದೆಯೇ ಬರೆದಿದ್ದೆ. ಈಚೆಗೆ ಬಾಗಲಕೋಟೆ ಸಮ್ಮೇಳನದ ಬಗೆಗೆ ಹಾಗೂ ಪರಿಷತ್ತಿನ ಉಳಿವಿನ ಬಗ್ಗೆ ಬರೆದಿದ್ದೇನೆ. ಈ ಹಿಂದೆ ಅಂದರೆ ಕನಕಪುರ ಸಮ್ಮೇಳನದ ಸಂದರ್ಭದಲ್ಲಿ 'ಬಿಸಿಲ ಬದುಕು' ಕೂಡ ನನ್ನ ಪತ್ರ ಪ್ರಕಟಿಸಿದೆ.

ಸಾಹಿತ್ಯಕ್ಕಾಗಿ ಶ್ರಮಿಸಿದ ಆಲೂರ ವೆಂಕಟರಾಯರು, ಕರ್ಪೂರ ಶ್ರೀನಿವಾಸರಾಯರು, ಬಿ.ಎಂ.ಶ್ರೀ, ಡಿ.ವಿ.ಜಿ. ಮತ್ತಿತರರ ಕಾಲದ ಸಾಹಿತ್ಯ ಪರಿಷತ್ತು ಸತ್ತು ಹೋಗಿದೆ! ಈಗ ಇರುವುದು ಕೇವಲ ಯಾವುದೋ ಒಂದು ಸರಕಾರಿ ಕಛೇರಿಯ ಜೋಭದ್ರಕಳೆ ಹೊತ್ತ ರಾಜಕೀಯ ಪಕ್ಷದ ಕಛೇರಿಯು ಮಾತ್ರ ಅದೇ ಹೆಸರಿನಲ್ಲಿ ಮಜಾ ಮಾಡುತ್ತಿದೆ! ವರ್ಷಕ್ಕೊಮ್ಮೆ ಅದೇ ಹೆಸರಿನಲ್ಲಿ ಸೂರೆ ಹೊಡೆಯುವ ಸಮ್ಮೇಳನಗಳಿಗಾಗಿಯೇ ತನ್ನ ಕುಟುಕು ಜೀವ ಉಳಿಸಿಕೊಂಡಿದೆ!!!

-ತಲಕಾಡು ವಿಶ್ವ ಸಮಾಜ
ವೆಂಕಟೇಶ್, ಟಿ.ನರಸೀಪುರ.

### ಮಾಹಿತಿ ಪೂರ್ಣ

ಮೇ ಸಂಚಿಕೆಯಲ್ಲಿ ಪ್ರಕಟವಾದ 'ಡಾಟ್ ಕಾಮ್ ಇದೇನಿದು' ಎಂಬ ಲೇಖನ ನಿಜಕ್ಕೂ ಮಾಹಿತಿ ಪೂರ್ಣವಾಗಿ ಮೂಡಿ ಬಂದಿದೆ. ಸಾಫ್ಟ್‌ವೇರ್ ತಂತ್ರಜ್ಞಾನವು ದಿನದಿಂದ ದಿನಕ್ಕೆ ಮುಂದುವರಿಯುತ್ತಿರುವ ಇಂದಿನ ದಿನಗಳಲ್ಲಿ ಕಂಪ್ಯೂಟರ್‌ಗಳು ಜನರ ದೈನಂದಿನ ಜೀವನದ ಅವಿಭಾಜ್ಯ ಅಂಗಗಳಾಗಿರುವುದು ಕಂಡು ಬರುತ್ತಿದೆ. ಇನ್ನು ಕೆಲವೇ ದಿನಗಳಲ್ಲಿ ಕಂಪ್ಯೂಟರ್ ಎಲ್ಲರಿಗೂ ಅನಿವಾರ್ಯ ಎಂಬ ದಿನಗಳು ದೂರವಿಲ್ಲ. ಲೇಖನ ಅತ್ಯುಪಯುಕ್ತ ಮಾಹಿತಿಗಳೊಂದಿಗೆ ಕೂಡಿದ್ದು ಕುತೂಹಲಕಾರಿಯಾಗಿತ್ತು. ಇತ್ತೀಚೆಗೆ ನಡೆದ ಮ್ಯಾಚ್ ಫಿಕ್ಸಿಂಗ್ ಬಗೆಗಿನ ಲೇಖನ ಈ ಹಗರಣದ ಒಳಹೊರಗನ್ನು ತುಂಬ ಚೆನ್ನಾಗಿ ಬಿಂಬಿಸಿದೆ.

- ಸಂತೋಷ್ ಆಚಾರ್ಯ, ದುಬಲಗುಂಡಿ.

### ವಿಳಾಸ ನೀಡಿ

ಏಪ್ರಿಲ್ 2000ದ 'ಬಿಸಿಲ ಬದುಕು' ವಿನಲ್ಲಿ 'ಡಾಲಿಯ ಬದುಕಿಗೆ, ಬೆಳಕು ತಂದ ಸೇವಾ' ಎಂಬ ಅನಿತಾ ಆರ್.ಎಸ್. ಅವರ ಲೇಖನ ಪ್ರಕಟವಾಗಿದೆ. ಮನೆಯಲ್ಲೇ ದುಡಿದು ಸಂಪಾದಿಸುವ ದಿಸೆಯಲ್ಲಿ Self employed women's association ಸಹಾಯ ಮಾಡುತ್ತದೆ ಎಂದು ಲೇಖನದಲ್ಲಿ ಹೇಳಲಾಗಿದೆ. ನಾನು ಕಷ್ಟದಲ್ಲಿರುವ ಮಹಿಳೆಯರಿಗೆ ನೆರವಾಗಲು ಈ ಸಂಸ್ಥೆಯ ವಿಳಾಸ ಬೇಕಾಗಿದೆ. ಅದರಲ್ಲಿ 'SEWA' ದ ವಿಳಾಸ ಅಥವಾ ಆ ಲೇಖನ ಬರೆದಿರುವ ಅನಿತಾ ಅವರ ವಿಳಾಸ ತಿಳಿಸಬೇಕೆಂದು ವಿನಂತಿ.

-ಕಲ್ಲಿನಾಥ ಮಾಧವನವರ, ಬೆಂಗಳೂರು.

**SEWA ADDRESS** : Self employed women's Association (SEWA), Reception Centre, Opposite Victoria Garden, Ahmedabad 380 001. Phone : 0917 5506477. Email : Access.SEWA.Mahila





## ರಾಜಕೀಯ



## ವಿಜ್ಞಾನ-ಆರೋಗ್ಯ





## ಪ್ರಚಲಿತ





## ಹಾಸ್ಯ





## ಕತೆ/ಕವನ





## ಕ್ರೀಡೆ





## ಸ್ಥಿರ ಶೀರ್ಷಿಕೆಗಳು



### ಮುಂದಿನ ಸಂಚಿಕೆಯಲ್ಲಿ

ಜೈವಿಕ ತಂತ್ರಜ್ಞಾನ ನಮಗೆಷ್ಟು ಅಗತ್ಯ?

ಜೊತೆಗೆ

# ಇವರೇನಾ ಆ ಘೋರ್ಪಡೆ?



ಕಾಲೇಜಲ್ಲಿ ಘೋರ್ಪಡೆ ಓದುತ್ತಾ ಇದ್ದಾಗ, ಮಧ್ಯಾಹ್ನ ಕಾಲೇಜಿಗೇ ಊಟ ಬರುತ್ತಿತ್ತು. ಉದ್ದದ ಕಾರು, ಅದರೊಳಗೊಬ್ಬ ಬಟ್ಲರ್. ಕಾಲೇಜು ಆವರಣದ ಮರದ ನೆರಳಲ್ಲಿ ಕಾರು ನಿಲ್ಲುತ್ತಾ ಇತ್ತು. ಬಟ್ಲರ್ ಸಾಂಗೋ ಸಾಂಗವಾಗಿ ಊಟದ ಪರಿಕರಗಳನ್ನು ಜೋಡಿಸಿ ಇಡುತ್ತಾ ಇದ್ದ. ಒಂದು ಸುಗ್ರಾಸ ಭೋಜನವನ್ನು ಇವರೊಬ್ಬರೇ ಆಸ್ವಾದಿಸುತ್ತಾ ಇದ್ದರು. ಇದು ಕೆಲವು ಕಾಲ ನಡೆಯಿತು.

**ತಿಳಿಯದೇ ಇದ್ದ ವಿಚಾರ ತಿಳಿಸಿ ಹೇಳಿದಾಗ ವಿನಯದಿಂದ ಒಪ್ಪುತ್ತಾರೆ. ಒಂದು ನಿಲುವಿಗೆ ಬಂದ ಮೇಲೆ ಅದಕ್ಕೆ ಅಂಟಿ ಉಳಿಯುತ್ತಾರೆ. ಇದು ರಾಜಕೀಯದಲ್ಲಿ ಸ್ವಲ್ಪ ಕಷ್ಟಕ್ಕೆ ಕಾರಣವಾಗುತ್ತದೆ. ಕಳೆದ ಕಾಂಗ್ರೆಸ್ ಸರ್ಕಾರದಲ್ಲಿ ಇವರು ಪಂಚಾಯತ್‌ರಾಜ್ ಸಚಿವರು. ಆಗ ಪಂಚಾಯತ್ ಚುನಾವಣೆ ಸಮಯ. 'ಚುನಾವಣೆ ನಡೆಸುತ್ತೇನೆ. ಸಾಧ್ಯ ಆಗದೇ ಇದ್ದಲ್ಲಿ ರಾಜೀನಾಮೆ ನೀಡುತ್ತೇನೆ' ಎಂದರು. ಅವರ ಪಕ್ಷ ಚುನಾವಣೆ ನಡೆಸಲು ಸಮ್ಮತಿ ನೀಡಲಿಲ್ಲ. ರಾಜೀನಾಮೆ ನೀಡಿ ಹೊರ ನಡೆದರು.**

ಇವರ ಹೆಸರು ಮುರಾರಾವ್ ಯಶವಂತರಾವ್ ಘೋರ್ಪಡೆ. ಅದೇಕೋ ಇವರ ಹೆಸರು ಬರೆಯುವಾಗೆಲ್ಲ ಜನ 'ಮುರಾರಿ' ಎಂದೇ ಬಳಸುತ್ತಾರೆ. 'ಮುರಾ' ಎಂಬುದು ರಾಕ್ಷಸನೊಬ್ಬನ ಹೆಸರು. ಆತನ ಸಂಹಾರ ಮಾಡಿ ಕಂಟಕ ನಿವಾರಿಸಿದನೆಂದೇ ಕೃಷ್ಣನಿಗೆ 'ಮುರಾರಿ' ಎಂದು ಹೆಸರು. ಈ ಘೋರ್ಪಡೆ ಅವರು ರಾಕ್ಷಸನ ಹೆಸರೇಕೆ ಆರಿಸಿಕೊಂಡರೋ ತಿಳಿಯದು.

ಇವರ ಹೆಸರಿನ ಬಗ್ಗೆ ಇರುವ ಗೊಂದಲ, ತಪ್ಪು ತಿಳುವಳಿಕೆಯ ಹಾಗೆ ಎಂ.ವೈ. ಘೋರ್ಪಡೆ ಅವರ ವ್ಯಕ್ತಿತ್ವದಲ್ಲಿಯೂ ಗೊಂದಲ ಇದೆ ಎಂದು ಅನೇಕ ಬಾರಿ ಅನ್ನಿಸುತ್ತದೆ.

ಇದೊಂದು ತೀರಾ ಹಿಂದಿನ ಘಟನೆ. ಎಂ.ವೈ.ಘೋರ್ಪಡೆ ಅವರು ಬೆಂಗಳೂರಿನ ಸೆಂಟ್ ಜೋಸೆಫ್ ಕಾಲೇಜಿನಲ್ಲಿ ಓದುತ್ತಾ ಇದ್ದರು. ಆಗ ಬ್ರಿಟಿಷ್ ಆಳ್ವಿಕೆಯ ಕಾಲ. ರಾಜ ಮಹಾರಾಜರು ಇನ್ನೂ ಗತ್ತಿನಿಂದ ಬದುಕುತ್ತಾ ಇದ್ದರು. ಸೊಂಡೂರಿನ ರಾಜ ಮನೆತನಕ್ಕೆ ಸೇರಿದ ಘೋರ್ಪಡೆ ಸಹಜವಾಗಿಯೇ ಆ ಗತ್ತಿನಲ್ಲಿ ಇದ್ದು ಬಿಟ್ಟಿದ್ದರು. ಅದೇ ಸಮಯಕ್ಕೆ ಸ್ವಾತಂತ್ರ್ಯ ಚಳವಳಿಯೂ ತೀವ್ರವಾಗುತ್ತಾ ಇತ್ತು. ಕಾಲೇಜು ಕಲಿಯಲು ಬರುವ ಎಳೆಯರಿಗೆ ಬ್ರಿಟಿಷರ ಬಗ್ಗೆ ಹಾಗೇ ರಾಜ ಮಹಾರಾಜರ ಬಗ್ಗೆ ಒಳಗೇ ಒಂದು ರೀತಿಯ ವ್ಯಗ್ರತೆ.

ಕಾಲೇಜಿಗೆ ಬರುತ್ತಾ ಇದ್ದವರು ಹೆಚ್ಚಾಗಿ ಬಡವರು, ಮಧ್ಯಮ ವರ್ಗದವರು. ಬೆಳಿಗ್ಗೆ ಮನೆ ಬಿಡುವಾಗ ತಂಗಳೋ ಮತ್ತೊಂದೋ ಹೊಟ್ಟೆಗೆ ಹಾಕಿಕೊಂಡರೆ, ಸಂಜೆ ಮತ್ತೆ ಮನೆಗೆ ಹೋಗುವವರೆಗೂ ಏನೂ ಇಲ್ಲ. ಕಾಲೇಜಲ್ಲಿ ಕೆಲವು ಶ್ರೀಮಂತರೂ ಇದ್ದರು. ಆದರೆ ಅವರು ಇಂಥ ದೌಲತ್ತು ಪ್ರದರ್ಶಿಸಲು ಹಿಂಜರಿಕೆ.

ಬಹುಷಃ ಅಬಕಾರಿ ಗುತ್ತಿಗೆದಾರರ ಕುಟುಂಬದಿಂದ ಬಂದ, ಮುಂದೆ ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್ ಪತ್ರಿಕೆಗಳ ಪ್ರಮುಖ ರೂವಾರಿ ಆದ ನೆಟ್ಟಕಲ್ಲಪ್ಪ ಅವರೂ ಇವರ ಸಮಕಾಲೀನರು ಎಂದು ಕಾಣುತ್ತದೆ. ಅವರೂ ತಕ್ಕಷ್ಟು ಶ್ರೀಮಂತರೇ. ಜೊತೇ ಯೌವನದ ತುಂಟತನ, ನಿರ್ಭಯತೆಗಳೂ ಇದ್ದವು.

ಕೆಲವು ಹುಡುಗರು ಘೋರ್ಪಡೆಯವರ ಮಧ್ಯಾಹ್ನ ಭೋಜನದ ಬಗ್ಗೆ ತಕರಾರು ತೆಗೆದರು. 'ಇಲ್ಲಿ ಬೇರೆ ಹುಡುಗರು ಅರೆಹೊಟ್ಟೆ, ಖಾಲಿ ಹೊಟ್ಟೆಯಲ್ಲಿ ತಳಮಳಿಸುತ್ತಾ ಇರುವಾಗ, ಈತ ಸುಗ್ರಾಸ ಭೋಜನ ಕಾಲೇಜು ಆವರಣದಲ್ಲಿಯೇ ಮಾಡುವುದು ಅಮಾನವೀಯತೆ ಅನ್ನಿಸುತ್ತದೆ. ಹೋಗಲಿ, ಎಲ್ಲಾದರೂ ಮರೆಯಾಗಿ ಕುಳಿತರೆ ಪರವಾಗಿಲ್ಲ. ಕಾಲೇಜಿನ ಆವರಣವೇ ಅವರ ಅರಮನೆಯ ಭೋಜನ ಶಾಲೆ ಎಂಬಂತೆ ವರ್ತಿಸುತ್ತಾರೆ' ಎಂದೆಲ್ಲ ಮಾತಾಡಿಕೊಂಡರು.

ನೆಟ್ಟಕಲ್ಲಪ್ಪ ಹುಡುಗರಿಗೆ ಸಮಾಧಾನ ಹೇಳಿದರು. ತಾವು ಅವರ ಜೊತೆ ಮಾತಾಡುವುದಾಗಿ ಹೇಳಿದರು. ಒಂದು ದಿನ ಸಮಯ ನೋಡಿ ವಿಷಯ ಪ್ರಸ್ತಾಪಿಸಿದರು. ಅವರ ಪ್ರತಿಕ್ರಿಯೆ ಏನು ಗೊತ್ತಾ? 'ಹೌದೇ! ನನಗೆ ಇದೆಲ್ಲ ಗೊತ್ತಿರಲಿಲ್ಲ.ಇನ್ನು ಮೇಲೆ ನೀನೂ, ನಿನ್ನ ಗೆಳೆಯರು ಬಂದು ನನ್ನ ಜೊತೆ ಊಟಕ್ಕೆ ಸೇರಬಹುದು'. ಕಾಲೇಜಿನಲ್ಲಿ ನೂರಾರು ಹುಡುಗರು. ಇದು ಕೇವಲ ಒಬ್ಬರ, ಇಬ್ಬರ ಹೊಟ್ಟೆಯ ಪ್ರಶ್ನೆ ಅಲ್ಲ. ಹಸಿದವರ ಮುಂದೆ ಕುಳಿತು ಹೀಗೆ ಊಟ ಮಾಡುವುದೇ ಅವರೆಲ್ಲರ ಬಗ್ಗೆ ತೋರುವ ಅಗೌರವ ಎಂದೆಲ್ಲ ವಿವರಿಸಿದ ಮೇಲೆ, 'ಓಹೊ!' ಎಂದಷ್ಟೆ ಅಂದರು. ಸುಮ್ಮನಾದರು. ಅವತ್ತಿನಿಂದ ಕಾಲೇಜಿಗೆ ಬರುತ್ತಿದ್ದ ಊಟ ನಿಂತು ಹೋಯಿತು. ಇದು ಘೋರ್ಪಡೆ ವ್ಯಕ್ತಿತ್ವದ ಒಂದು ಮುಖ. ಬಹು ಮುಖ್ಯ ಮುಖ ಕೂಡ. ತಿಳಿಯದೇ ಇದ್ದ ವಿಚಾರ ತಿಳಿಸಿ ಹೇಳಿದಾಗ ವಿನಯದಿಂದ ಒಪ್ಪುತ್ತಾರೆ. ಒಂದು ನಿಲುವಿಗೆ ಬಂದ ಮೇಲೆ ಅದಕ್ಕೆ ಅಂಟಿ ಉಳಿಯುತ್ತಾರೆ. ಇದು ರಾಜಕೀಯದಲ್ಲಿ ಸ್ವಲ್ಪ ಕಷ್ಟಕ್ಕೆ ಕಾರಣವಾಗುತ್ತದೆ. ಕಳೆದ ಕಾಂಗ್ರೆಸ್ ಸರ್ಕಾರದಲ್ಲಿ ಇವರು ಪಂಚಾಯತ್‌ರಾಜ್ ಸಚಿವರು. ಆಗ ಪಂಚಾಯತ್ ಚುನಾವಣೆ ಸಮಯ. 'ಚುನಾವಣೆ ನಡೆಸುತ್ತೇನೆ. ಸಾಧ್ಯ ಆಗದೇ ಇದ್ದಲ್ಲಿ ರಾಜೀನಾಮೆ ನೀಡುತ್ತೇನೆ' ಎಂದರು. ಅವರ ಪಕ್ಷ ಚುನಾವಣೆ ನಡೆಸಲು ಸಮ್ಮತಿ ನೀಡಲಿಲ್ಲ. ರಾಜೀನಾಮೆ ನೀಡಿ ಹೊರ ನಡೆದರು.

ಅಧಿಕಾರದ ಗದ್ದುಗೆ ಹಿಡಿಯಲು, ಆನಂತರ ಅದಕ್ಕೆ ಅಂಟಿ ಕೂರಲು ಏನು ಬೇಕಾದರೂ ಮಾಡಲು ತಯಾರಿರುವ ಇಂದಿನ ದಿನಗಳಲ್ಲಿ ಘೋರ್ಪಡೆ ಸ್ವಲ್ಪ 'ವಕ್ರ' ಎನಿಸಿಕೊಂಡದ್ದು ಆಶ್ಚರ್ಯ ಏನಲ್ಲ.

ಈ ಬಾರಿ ಮತ್ತೆ ಅವರು ಪಂಚಾಯತ್ ರಾಜ್ ಸಚಿವರು. ಮತ್ತೆ ಪಂಚಾಯತ್ ಚುನಾವಣೆಗಳು ಬಂದಿವೆ. ಗ್ರಾಮ ಪಂಚಾಯತ್ ಚುನಾವಣೆಗಳು ಆಗಿವೆ. ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್ ಚುನಾವಣೆ ಕೂಡ ಈ ಪತ್ರಿಕೆ ನಿಮ್ಮ ಕೈ ಮುಟ್ಟುವ ವೇಳೆಗೆ ಮುಗಿದಿರುತ್ತವೆ.

ಕಳೆದ ಬಾರಿಯ ಅನುಭವದಿಂದ ಘೋರ್ಪಡೆ ಪಾಠ ಕಲಿತಿದ್ದಾರೆ. ರಾಜೀನಾಮೆ ಒಳ್ಳೆಯ ಉಪಾಯ ಅಲ್ಲ. ಇದ್ದುಕೊಂಡೇ ಅಂದಿದ್ದು ಮಾಡಿ ತೋರಿಸಬೇಕು ಎಂಬ ಛಲ ಅವರಲ್ಲಿ ಕಾಣಿಸಿದೆ. ಆ ಕಾರಣಕ್ಕೆ ಅವರು ಹಲವು ರಿಯಾಯಿತಿಗಳಿಗೆ ತಲೆಬಾಗಬೇಕಾಗಿ ಬಂದಿದೆ. ಪಂಚಾಯತ್‌ಗಳಲ್ಲಿನ ಮೀಸಲಾತಿ ಕುರಿತಂತೆ ಕಾಂಗ್ರೆಸ್ ಪಕ್ಷದೊಳಗೇ ಇರುವ ತಿಕ್ಕಾಟ, ಹೇಗಾದರೂ ಮಾಡಿ ತಾವು, ತಮ್ಮವರೇ ಪಂಚಾಯತ್‌ಗಳಲ್ಲಿ ವಿಜೃಂಭಿಸಬೇಕೆಂಬ ಹುನ್ನಾರಕ್ಕೆ ಅನಿವಾರ್ಯವಾಗಿ ಘೋರ್ಪಡೆ ತಲೆ ಬಾಗಿ ಬಿಟ್ಟಿದ್ದಾರೆ.

ನಿಜವಾದ ಅರ್ಥದಲ್ಲಿ ವಿಕೇಂದ್ರಿಕರಣ ಆಗಲು ಇಂಥವೆಲ್ಲ ಅಡ್ಡಿ ಎಂಬುದು ಅವರಿಗೂ ಗೊತ್ತು. ಅವರ ಪಕ್ಷಕ್ಕೆ ಅಧಿಕಾರ ಮುಖ್ಯ, ಸಿದ್ಧಾಂತವಲ್ಲ. ಇವರಿಗೆ ಸಿದ್ಧಾಂತ ಮುಖ್ಯ. ಆದರೆ ಅಧಿಕಾರ ಬೇಡ ಎಂದಲ್ಲ.

ಈ ನಿಲುವಿಗೆ ಅವರು ಹೇಳುವ ಕಾರಣ 'ಎರಡು ಕೇಡುಗಳ ನಡುವೆ ಒಂದನ್ನು ಆರಿಸಿಕೊಳ್ಳಲೇಬೇಕಿದೆ. ನಾನು ಸಣ್ಣ ಕೇಡು ಆರಿಸಿಕೊಂಡಿದ್ದೇನೆ'

ಯಾಕೋ ಇದು ಘೋರ್ಪಡೆ ದನಿ ಅಲ್ಲ ಅಂತ ಅನ್ನಿಸುತ್ತಾ ಇರುವುದು ವಿಚಿತ್ರ.

■ ಸುಹಾಸ

## ಮನುಷ್ಯತ್ವ

ಝೆನ್ ಗುರು ಒಬ್ಬ ಧ್ಯಾನ, ಏಕಾಂತಕ್ಕೆ ಜಾಗ ಹುಡುಕುತ್ತಾ ಇದ್ದ. ಊರಿನ ಹಿರಿಯ ಹೆಂಗಸಿಗೆ ಇದು ತಿಳಿಯಿತು. ಕರೆದು ತನ್ನ ಮನೆಯ ಹಿತ್ತಲಲ್ಲಿ ಜಾಗ ಕೊಟ್ಟಳು. ಅಲ್ಲೊಂದು ಗುಡಿಸಲು. ಅಲ್ಲಿ ಯಾರ ಕಾಟವೂ ಇರುತ್ತಾ ಇರಲಿಲ್ಲ. ಗುರು ಅದು ಒಪ್ಪಿಕೊಂಡ. ಆತ್ಮ ಸಂಯಮಕ್ಕೆ ಧ್ಯಾನಿಸಬೇಕು. ಅದಕ್ಕೆ ಇದು ಒಳ್ಳೆಯ ಜಾಗ ಎಂದು ಕೃತಜ್ಞತೆ ತುಂಬಿ ಹೇಳಿದ.

ಮನೆಯ ಹಿಂದಿನ ಗುಡಿಸಲಲ್ಲಿ ಗುರುವಿನ ಧ್ಯಾನ ಸಾಗಿತು. ವರ್ಷಗಳು ಉರುಳಿದವು. ಗುರು ಎಷ್ಟು ಸಂಯಮ ಸಾಧಿಸಿದ್ದಾನೆ ಎಂದು ತಿಳಿಯಲು ಹೆಂಗಸಿಗೆ ಕುತೂಹಲ. ಒಂದು ದಿನ ಸುಂದರ ಹುಡುಗಿಯನ್ನು ಕರೆದು ತಂದಳು. 'ಗುರು ಇರುವ ಕಡೆ ಹೋಗು, ಆತನನ್ನು ಕೆಣಕಲು ಯತ್ನಿಸು, ಏನಾಗುತ್ತದೋ ಬಂದು ತಿಳಿಸು' ಎಂದಳು.

ಸ್ವಲ್ಪ ಹೊತ್ತಿನಲ್ಲೇ ಗುಡಿಸಲಿಂದ ಚೀರಾಟ ಕೇಳಿ ಬಂತು. ಮರುಕ್ಷಣ ಆ ಹುಡುಗಿ ಬಾಣದಂತೆ ಚಿಮ್ಮಿ ಬಂದು ಎದುರು ನಿಂತಳು. ನೋಡಿದರೆ ಕೂದಲು ಕೆದರಿದೆ. ಮೈ ಬಟ್ಟೆಯೆಲ್ಲ ಹರಿದಿದೆ. ಹುಡುಗಿಯ ಕಣ್ಣಲ್ಲಿ ನೀರು. ಏನಾಯಿತೆಂದು ವಿಚಾರಿಸಿದ್ದಕ್ಕೆ ಹೇಳಿದಳು : ಹೋಗುತ್ತಿದ್ದ ಹಾಗೆ ಗುರು ರೇಗಾಡಿದರು. ನನ್ನನ್ನು ಕೆಡಿಸಲು ಬಂದಿದ್ದೀಯ ಎಂದು ಚೀರಾಡಿದರು. ಅದಕ್ಕೂ ಜಗ್ಗದೇ ನಿಂತಿದ್ದಾಗ ಬೆನ್ನಟ್ಟಿ ಹೊಡೆದರು. ಮೊದಲು ಇಲ್ಲಿಂದ ತೊಲಗು ಎಂದು ಕಾಡಿ ಬಡಿದರು.

ಹೆಂಗಸಿಗೆ ಸಿಟ್ಟು ಬಂತು. ಒಂದು ಪೊರಕೆ ಎತ್ತಿಕೊಂಡು ಗುಡಿಸಲಿಗೆ ಹೋಗಿ ಗುರುವನ್ನು ಮನದಣಿಯುವಂತೆ ಬಡಿದು ಸುಸ್ತಾಗಿ,

'ನಿನ್ನ ಆತ್ಮ ಸಂಯಮದ ಮನೆ ಹಾಳಾಗಲಿ. ನೀನು ಆ ಹುಡುಗಿಯ ಜೊತೆ ಕೂಡಿ ಸುಖಿಸಿದ್ದರೂ ನನಗೆ ದುಃಖ ಆಗುತ್ತಾ ಇರಲಿಲ್ಲ. ನಿನ್ನಲ್ಲಿ ಕೊಂಚ ಮನುಷ್ಯತ್ವ ಕೂಡ ಇಲ್ಲದೇ ಹೋಯಿತೆ! ಮನುಷ್ಯತ್ವ ಕೂಡ ಇಲ್ಲದ ನಿನ್ನ ಸಂಯಮ ಕಟ್ಟಿಕೊಂಡು ಏನಾಗಬೇಕಾಗಿದೆ! ಮೊದಲು ಇಲ್ಲಿಂದ ಹೊರಡು' ಎಂದು ಗುರುವನ್ನು ತಕ್ಷಣ ಆಚೆ ಹಾಕಿದಳು.

★

ಮಹಾರಾಷ್ಟ್ರದ ವಿಧಾನ ಮಂಡಲದಲ್ಲೂ ಅದೇ ಸಮಸ್ಯೆ. ಶಾಸಕರು, ಸಚಿವರು ಸದನದಲ್ಲಿ ಇರುವುದಿಲ್ಲ. ಕಳೆದ ಏಪ್ರಿಲ್‌ನಲ್ಲಿ ಗೈರು ಹಾಜರಿಗೆ ಕಾಂಗ್ರೆಸ್ ಶಾಸಕರು, ಸಚಿವರಿಗೆ ಒಂದು ಒಳ್ಳೇ ನೆಪ ಸಿಕ್ಕಿತು. ಮೇಡಂ ಸೋನಿಯಾ ನಾಗಪುರಕ್ಕೆ ಭೇಟಿ ನೀಡುವುದಿತ್ತು. ಅದರ ಸಿದ್ಧತೆಯಲ್ಲಿ ತೊಡಗಿರುವುದಾಗಿ ಮೊದಲಿಗಿಂತ ಹೆಚ್ಚು ಗೈರುಹಾಜರಿ ಕಂಡು ಬಂತು. ಅಷ್ಟೇ ಅಲ್ಲ ಯಾರು ಏನೇ ಸಮಸ್ಯೆ ತಂದು ಎದುರಿಟ್ಟರೂ 'ಏನ್ರೀ ಅಷ್ಟು ಗೊತ್ತಾಗೋದಿಲ್ಲವಾ? ಮೇಡಂ ಬರ್‍ತಾ ಇದಾರೆ. ನೀವು ಆಮೇಲೆ ಬನ್ನಿ....' ಸಿದ್ಧ ಉತ್ತರ ದೊರೆಯುತ್ತಿತ್ತು.

ಈಗ ಮೇಡಂ ಬಂದು ಹೋಗಿ ಆಗಿದೆ. ಬೇರೇನು ಉತ್ತರ, ನೆವ ಹುಡುಕುತ್ತಾರೋ ತಿಳಿಯದು.

★

ಏಪ್ರಿಲ್ 25ರಂದು ಬೆಂಗಳೂರಲ್ಲಿ ಒಂದು ಭೋಜನಕೂಟ. ಒಂದೊಂದು ಊಟಕ್ಕೂ ನೂರು ರೂಪಾಯಿ ಖರ್ಚು. ವ್ಯವಸ್ಥೆ ಮಾಡಿದ್ದವರು ಕೇಂದ್ರ ಸಚಿವ ಅನಂತ್‌ಕುಮಾರ್. ಕಾರ್ಯಕರ್ತರಿಗೆ ಎಂದು ಏರ್ಪಾಡಾಗಿದ್ದ ಈ ಭೋಜನ ಕೂಟಕ್ಕೆ 'ಯುಗಾದಿ ಸ್ನೇಹಮಿಲನ' ಎಂದೂ ಹೇಳಲಾಗಿತ್ತು. ತಮಾಷೆ ಎಂದರೆ ಯುಗಾದಿ ಮುಗಿದು ಆಗಲೇ ಇಪ್ಪತ್ತು ದಿನಗಳ ಮೇಲಾಗಿತ್ತು.

ಅದಕ್ಕಿಂತ ತಮಾಷೆ ಎಂದರೆ, ಎರಡು ದಿನದ ಹಿಂದೆ ಪ್ರಧಾನಿ ವಾಜಪೇಯಿ ಅವರು ಬರ ಪೀಡಿತ ಪ್ರದೇಶಗಳ ಪರಿಹಾರ ಕಾರ್ಯಕ್ಕೆ 'ಒಂದೊಂದು ರೂಪಾಯಿ ಕೊಡಿ' ಎಂದು ಜನರನ್ನು ಬೇಡಿಕೊಂಡಿದ್ದರು.

★

ರಾಜ್ಯಪಾಲರಾದ ವಿ.ಎಸ್.ರಮಾದೇವಿ ಈ ಬಾರಿ ಬಜೆಟ್ ಅಧಿವೇಶನದಲ್ಲಿ ಕನ್ನಡದಲ್ಲಿ ಭಾಷಣ ಮಾಡಿ ಎಲ್ಲರ ಮೆಚ್ಚುಗೆ ಗಳಿಸಿದ್ದು ಈಗ ಹಳೆಯ ಸಂಗತಿ.

ಅವರು ಇಡೀ ಭಾಷಣವನ್ನು ತೆಲುಗು ಲಿಪಿಯಲ್ಲಿ ಬರೆದುಕೊಂಡಿದ್ದು, ಭಾಷಣಕ್ಕೆಂದೇ ಎರಡು ದಿನ ಕನ್ನಡಿ ಮುಂದೆ ಕುಳಿತು ರಿಹರ್ಸಲ್ ನಡೆಸಿದ್ದು ಹೊಸ ಸುದ್ದಿ.

★

ಕಾರೊಂದರ ಅಲಂಕಾರ ಸಾಮಗ್ರಿ ಮಾಡುವ ಅಂಗಡಿಯೊಂದರ ಜಾಹೀರಾತು

'ನಿಮ್ಮ ಕಾರ್‌ಗೆ ಮಾತು ಬರುತ್ತಿದ್ದರೆ ನೇರವಾಗಿ ನಮ್ಮಲ್ಲಿಗೇ ಕರೆದು ತರುತ್ತಿತ್ತು. ಅದರಿಂದ ನೀವು ಅಲ್ಲಿ ಇಲ್ಲಿ ಸುತ್ತುವುದು ತಪ್ಪುತ್ತಿತ್ತು'



## ನೈಪಾಲ್ ಕಂಡ

# ಕರ್ನಾಟಕ ರಾಜಕಾರಣದ ಸ್ಫೋಟಕ ಸತ್ಯಗಳು

**ವಿ.ಎಸ್. ನೈಪಾಲ್ ಮೂಲತಃ ಬಾಂಗ್ಲಾ ದೇಶದವರು. ಹೆಸರಾಂತ ಇಂಗ್ಲಿಷ್ ಲೇಖಕರು. ಅವರು ಭಾರತದ ಬಗ್ಗೆ ಬರೆದ 'ಏರಿಯಾ ಆಫ್ ಡಾರ್ಕ್‌ನೆಸ್' ಹಾಗೂ 'ಥೌಸೆಂಡ್ ಮ್ಯೂಟಿನೀಸ್' ಅತ್ಯಂತ ವಿವಾದಾತ್ಮಕ ಪುಸ್ತಕಗಳು. ಎರಡನೆ ಪುಸ್ತಕ ಬರೆಯುವ ಮುನ್ನ ಅವರು ಬೆಂಗಳೂರಿಗೂ ಭೇಟಿ ನೀಡಿ ಹಲವಾರು ಜನರನ್ನು ಸಂದರ್ಶಿಸಿದ್ದರು. ಪ್ರಮುಖವಾಗಿ ರಾಜಕಾರಣಿಗಳು ಈ ಸಂದರ್ಶನದಲ್ಲಿ ಪಾಲ್ಗೊಂಡಿದ್ದರು. ಆದರೆ 'ಥೌಸೆಂಡ್ ಮ್ಯಾಟಿನೀಸ್' ಪ್ರಕಟವಾದಾಗ ಸಂದರ್ಶನದ ಎಲ್ಲ ವಿವರಗಳೂ ಅದರಲ್ಲಿ ಇರಲಿಲ್ಲ. ಆಗಿನ ಸಂದರ್ಶನದಲ್ಲಿ ಪ್ರತ್ಯಕ್ಷದರ್ಶಿಯಾಗಿದ್ದ ವ್ಯಕ್ತಿ ನೈಪಾಲ್ ಕಂಡ ಕರ್ನಾಟಕದ ರಾಜಕಾರಣದ ಬಹಳ ಅಪರೂಪದ ಸತ್ಯಗಳನ್ನು ಇಲ್ಲಿ ದಾಖಲಿಸಿದ್ದಾರೆ.**



ಟೆಲಿಫೋನ್ ಟ್ಯಾಪಿಂಗ್ ಮಾಡಿದ್ದು ಯಾರು?

ವಿಧ್ಯಾಧರ ಶಿವ ನೈಪಾಲ್ ಒಮ್ಮೆ ಬೆಂಗಳೂರಿಗೆ ಬಂದಿದ್ದರು. ಭಾರತದ ಎಲ್ಲ ರೀತಿಯ, ಎಲ್ಲ ರಂಗದ ಸಮಸ್ಯೆಗಳ ಬಗ್ಗೆ ಹಿಂದುಳಿದವರು ಏಕೆ ಹಿಂದೆ ಬರೆದಿದ್ದ 'ಏರಿಯಾ ಆಫ್ ಡಾರ್ಕ್‌ನೆಸ್' ಅವರಿಗೆ ಖ್ಯಾತಿ, ಭಾರತಕ್ಕೆ ಕುಖ್ಯಾತಿ ತಂದುಕೊಟ್ಟಿತ್ತು. ಪರಚಿಂತೆ ನಮಗೇಕೆ ಅಯ್ಯಾ, ನಮ್ಮದೇ ಚಿಂತೆ ಹಾಸಲುಂಟು, ಹೊದೆಯಲುಂಟು ಎಂಬಂತೆ ಈ ಪುಸ್ತಕ ನಾನು ಓದಿರಲಿಲ್ಲ. ಪತ್ರಿಕೆಗಳಲ್ಲಿ ಅದರ ವಾಚಕರವಾಣಿಗಳಲ್ಲಿ ಆಗ ಇದ್ದ ಕೆಲವೇ ಪತ್ರಿಕೆಗಳಲ್ಲಿ ಬಾರದ ಯಾವ ವಿಷಯವೂ, ಅಭಿಪ್ರಾಯವು ಈ ಪುಸ್ತಕದಲ್ಲಿರಲಿಲ್ಲ. ನೈಪಾಲರನ್ನು ಬೆಂಗಳೂರಿನಲ್ಲಿ ಅವರಿವರನ್ನು ಭೇಟಿಮಾಡಿಸುವ, ಭೇಟಿಯಾದವರು ಕನ್ನಡದಲ್ಲಿ ಮಾತಾಡಿದರೆ ಅದನ್ನು ಇಂಗ್ಲಿಷ್‌ನಲ್ಲಿ ಹೇಳುವ ಅಸೈನ್‌ಮೆಂಟ್ ಬಿದ್ದರಿಂದ, ತಕ್ಷಣವೇ ಅವರ ಕೆಲವು ಪುಸ್ತಕಗಳ ಮೇಲೆ ಕಣ್ಣಾಡಿಸಿದೆ.

ಆದರೂ ಕೆಲವೇ ವಾಕ್ಯಗಳಲ್ಲಿ ಒಂದು ಘಟನೆ, ದೃಶ್ಯವನ್ನು ಒಬ್ಬ ಮನುಷ್ಯನ ಗೆಸ್ಚರ್ ಬಣ್ಣಿಸುವ ಮೂಲಕ ಅವನ ವೀಕ್‌ನೆಸ್ ಅಥವಾ ಶಕ್ತಿಯನ್ನು ಬಣ್ಣಿಸಬಲ್ಲ ಶಕ್ತಿ ಇದೆ ಎಂದೆನಿಸಿತು. ಆದರೆ ಫುಲ್‌ಟೈಂ ಬರಹಗಾರನಾದ ಯಾವುದೇ ಬ್ರಿಟನ್ನಿನವ ಇದೇ ಕೆಲಸ ಮಾಡಬಲ್ಲ ಎಂದೂ ಅನಿಸಿತು. ಆದರೆ ನೈಪಾಲ್ ವೆಸ್ಟ್ ಇಂಡೀಸ್‌ನಲ್ಲಿ ವಾಸಿಸುವ ಭಾರತೀಯ ಸಂಜಾತ. ಹಾಗೂ ಯಾವಾಗಲೂ ಏನಾದರೂ ಆಗುತ್ತಲೇ ಇರುವ ಭಾರತದ ಬಗ್ಗೆ ಬರೆದರೆ ಅದಕ್ಕೊಂದು ಮಾರ್ಕೆಟ್ಟಿದೆ ಎಂದು ತಿಳಿದಿರುವ ಜಾಣನೂ ಹೌದು. ನೈಪಾಲ್ ಈ ಬಾರಿ ಬಂದದ್ದು, ಇಂಡಿಯ : ಎ ತೌಸಂಡ್ ಮ್ಯಾಟಿನೀಸ್' ಎಂಬ ಪುಸ್ತಕ ಬರೆಯಲು

ನಮ್ಮ ಪ್ರವೃತ್ತಿ ಬಗ್ಗೆ ಒಂದು ಹೊರಗಿನ ಆ್ಯಂಗಲ್ ಇದೆ, ಅದೇ ಕೆಲವು ಬಾರಿ ಸರಿಯಾದ ದೃಷ್ಟಿಕೋನ ಎಂಬ ಅರಿವು ಬಂದದ್ದೂ ಆಗಲೇ. ಕರ್ನಾಟಕದವನು ಬಿಹಾರ್‌ಗೆ ಹೋದಾಗ ಅಲ್ಲಿ ಸರ್ಕಾರದ ವೈರ್‌ನಿಂದ ವಿದ್ಯುಚ್ಛಕ್ತಿಯನ್ನು ತನ್ನ ಐರನ್‌ಬಾಕ್ಸ್‌ಗೂ ತನ್ನ ಟ್ರಾನ್ಸಿಸ್ಟರ್‌ಗೂ ಎಳೆದು ಅಚ್ಚುಕಟ್ಟಾಗಿ ಇಸ್ತ್ರಿ ಮಾಡಿ, ಇಜ್ಜಲಿಗೆ ಒಂಚೂರೂ ಖರ್ಚುಮಾಡದೆ ಇರುವ ಜಾಣತನ, ಅಲ್ಲಿನವರಿಗೆ ಅಚ್ಚರಿಯಾಗದಿದ್ದರೂ, ಹೊರಗಿನವರಿಗೆ ವಿಶೇಷ ಎನಿಸಬಹುದು. ಹಾಗೆ ಮುಂಬಯಿಯವನು ಬೆಂಗಳೂರು ಬಗ್ಗೆ ಬರೆಯುವಾಗ ನಮ್ಮ ಒನ್‌ಬೈಟೂ ಕಾಫಿ ಕುಡಿಯುವ ಪ್ರವೃತ್ತಿ ವಿಶೇಷ ಎನಿಸಬಹುದು. ಆದರೆ ಸುಮ್ಮನಿದ್ದಾಗ ಒಂದು ಸಹಜ ನಿವೃತ್ತರ ನಿರ್ಲಿಪ್ತತೆ ಪ್ರದರ್ಶಿಸುವ ಮಹಿಷೂರ ಕನ್ನಡಿಗ, ವಾಹನ ಓಡಿಸುವಾಗ ಮೈಮೇಲೆ ಬಂದವರಂತೆ ವರ್ತಿಸುವುದು ಹೊರಗಿನವರ ಕಣ್ಣಿಗೆ ಮಾತ್ರ ಬೀಳಬಲ್ಲದೇನೋ

ಈ ಪುಸ್ತಕ ಒಂದು ರೀತಿ ಒಂದು ಮಟ್ಟದ ಕಿರಿಕಿರಿ ಮನಸ್ಥಿತಿಯಿಂದಲೇ ಬರೆದ 'ಏರಿಯಾ ಆಫ್ ಡಾರ್ಕ್‌ನೆಸ್' (ನೈಪಾಲ್ ಆಗಲೂ ಅಷ್ಟೇ ಈಗಲೂ ಅಷ್ಟೆ ಸ್ವಲ್ಪ ಗೂರಲಿಂದ ಬಳಲುತ್ತಾರೆ) ಪುಸ್ತಕದಿಂದ ಬಂದಿರಬಹುದಾದ ಗಿಲ್ಟ್ ಫೀಲಿಂಗನ್ನು ತೊಡೆದು ಹಾಕಲೆಂದೇ '.... ತೌಸಂಡ್ ಮ್ಯಾಟೀನೀಸ್' ಬರೆದಂತಿತ್ತು. ನಮ್ಮ ಬಗ್ಗೆ ನಮಗೇ ಸಂಕೋಚವೆನಿಸುವಷ್ಟು ಹೊಗಳಿದ್ದರು. ಕೆಲವು ಬಾರಿ ಇವರು ಮೂಲಭೂತವಾಗಿ 'ಚಡ್ಡಿ' ಎನ್ನುವಷ್ಟು ನಮ್ಮ ಪರಂಪರೆಯನ್ನು ರಹಸ್ಯವಾಗಿಯೇ ಪ್ರೀತಿಸುತ್ತಿದ್ದಂತೆಯೂ ಕಂಡು ಬಂದಿತು. ಒಂದು ಇಡೀ ಅಧ್ಯಾಯ ಒಂದು ಕಾಲದಲ್ಲಿ ಸ್ವಾತಂತ್ರ ಹೋರಾಟದಲ್ಲಿ ತೊಡಗಿಸಿಕೊಂಡ ಒಬ್ಬ, ನಂತರ 'ವಿಮನ್ಸ್ ಎರಾ' ಮಹಿಳಾ ಪತ್ರಿಕೆಯಿಂದ ಹಣ ಖ್ಯಾತಿ ಪಡೆದರ ಬಗ್ಗೆ ಇದ್ದು, ಆ ಪತ್ರಿಕೆಯಲ್ಲಿ ಇಂಗ್ಲಿಷ್ ಬಾರದ ಯುವ ಪ್ರೇಮಿಗಳಿಗೆ ಪ್ರೇಮ ಪತ್ರವ್ಯವಹಾರ ನಡೆಸಲು, ಎಂಥಹ ಸ್ಟೇಷನರಿ ಅಂಗಡಿಯಲ್ಲಿ ಯಾವ ಬಣ್ಣದ ಕಾಗದ ಕೊಳ್ಳಬೇಕು ಎಂಬುವುದರ ಬಗ್ಗೆ ತಿಳಿಸಿದ ವಿವರಗಳನ್ನು ಮೆಚ್ಚಿಕೊಂಡ ಬರವಣಿಗೆಗೆ ಮೀಸಲಾಗಿತ್ತು. ಇದೆಲ್ಲ

'ತೌಸಂಡ್ ಮ್ಯಾಟಿನೀಸ್' ಪ್ರಕಟವಾದ ಮೇಲೆ ತಿಳಿದದ್ದು. ಭಾರತದಲ್ಲಿ ಎಲ್ಲ ರಾಜ್ಯಗಳಲ್ಲಿ ಅಲ್ಲಿನ ಪತ್ರಕರ್ತರನ್ನೇ ಅಲ್ಲಲ್ಲಿನ ರಾಜಕೀಯ, ಸಂಸ್ಕೃತಿ ಬಗ್ಗೆ ಸಹಕಾರ್ಯಾರನ್ನು ಸಂದರ್ಶಿಸಬೇಕು ಎಂದು ನಿರ್ಧರಿಸಿದ್ದ ನೈಪಾಲ್. ಪಂಜಾಬ್‌ನಲ್ಲಿ ಅಂದು ಹಿಂದೂಸ್ತಾನ್ ಟೈಮ್ಸ್ ವರದಿಗಾರನಾಗಿದ್ದು, ನಂತರ ಶಿಕ್ಷೆಯಂತೆ ಬೆಂಗಳೂರಿನಲ್ಲಿ ಅದೇ ಪತ್ರಿಕೆಗೆ ಬಾತ್ಮೀದಾರನಾಗಿದ್ದ ಅಜಯ್‌ಸಿಂಗ್‌ನನ್ನೂ, ಬೆಂಗಳೂರಿನಲ್ಲಿ ನನ್ನನ್ನು, ಮದರಾಸಿನಲ್ಲಿ ಸುರೇಶ್ ಮೆನನ್‌ನ್ನೂ ಬಳಸಿಕೊಂಡಿದ್ದರು.

ಆಸೆಯಿಂದ ಇವರನ್ನು ವೆಸ್ಟ್‌ಎಂಡ್ ಹೋಟೆಲಿನಲ್ಲಿ ಭೇಟಿಯಾದಾಗ ಅತಿ ಚುರುಕಾದ ತರಲೆ ಮುದುಕನಂತೆ ಕಂಡರು. ತೋಳು ಮಡಿಚಿದ ಬಿಳೀ ಶರ್ಟು, ಬಿಳೀ ಪಂಚೆ ತೊಡಿಸಿಬಿಟ್ಟಿದ್ದರೆ ಧಾರಾಳವಾಗಿ, 'ಬೋನೇಗೌಡ್ರೇ' ಎಂದು ಕರೆಯಬಹುದಿತ್ತು. ಆದರೆ, ಗೂರಲಿದ್ದರಿಂದ ಸದಾ ಬೆಚ್ಚಗಿರಬೇಕಾದ ಅವಶ್ಯಕತೆಯೋ ಏನೋ ಕೋಟು ಪ್ಯಾಂಟಿನಲ್ಲಿದ್ದರೂ, ವಿದೇಶೀಯ ಎನಿಸುತ್ತಿರಲಿಲ್ಲ. ಆದರೆ ವರ್ತಿಸುವ ರೀತಿ, ಮಾತಾಡುವ ಧಾಟಿ, ಧೋರಣೆ ಅಪ್ಪಟ ಬ್ರಿಟಿಷ್‌ನವನಂತಿತ್ತು.



ವಕೀಲರಿಗೇಕೆ ರಾಜಕೀಯದ ನಂಟು?

ಅಪ್ಪಟ ರಾಜಕಾರಣಿಯೊಬ್ಬನ ಪರಿಚಯಬೇಕು ಎಂದಿದ್ದರಿಂದ ನಾನು ದಳದ ನಾಯಕ ಸಿ.ನಾರಾಯಣ ಸ್ವಾಮಿ ಅವರೊಂದಿಗೆ ಭೇಟಿಮಾಡಿಸಿದ್ದೆ. ಅವರು ಜಾತಿ ರಾಜಕಾರಣ, ಹಣದ ರಾಜಕಾರಣದ ಬಗ್ಗೆ ಸಾಕಷ್ಟು ತಿಳಿಸಿದರೂ, ನೈಪಾಲ್‌ಗೆ ನಾರಾಯಣಸ್ವಾಮಿ ಸಾಕಷ್ಟು ವರ್ಣರಂಜಿತವಾಗಿ ಕಂಡುಬರಲಿಲ್ಲ. ಒಮ್ಮೆ ಮಾತಿನ ಮಧ್ಯೆ ನಾರಾಯಣಸ್ವಾಮಿ ಅವರನ್ನು ಕರುಣೆಯಿಂದ ನೋಡುತ್ತ, 'ಏನು ಮಾಡುತ್ತೀರಿ?' ಎಂದು ಕೇಳಿದರು. 'ಆಲೂಗೆಡ್ಡೆ ಬೆಳೆಯುತ್ತೇನೆ' ಎಂದರು ನಾರಾಯಣಸ್ವಾಮಿ. 'ಆ.... ಲೂ.... ಗೆಡ್ಡೆ?' ಎಂದರೆ ಇಂಗ್ಲಿಷಿನಲ್ಲಿ 'Potatoes'ನಲ್ಲಿ 'P' ಯನ್ನೂ, 't'ಯನ್ನು ಒತ್ತಿ, ಮುಖ ಕಿವಿಚಿ, ಇದುವರೆಗೂ ಆಲೂಗೆಡ್ಡೆ ಬೆಳೆಯದ ರಾಜಕಾರಣಿಯನ್ನು ಭೇಟಿಯೇ ಮಾಡಿಲ್ಲ ಎಂಬಂತೆ ಕೇಳಿದರು. ನಾರಾಯಣಸ್ವಾಮಿ ಯಾವ ಎಗ್ಗಿಲ್ಲದೆ, 'ಯಸ್ ಸರ್, 1953ರಿಂದ' ಎಂದರು ಸೇರಿಸಿದರು.

ನೈಪಾಲ್ ಮತ್ತೆ, 'ಪೊಟೆಟೋಸ್?.... ಸಿನ್ಸ್ 1953' ಎಂದು ಮತ್ತೆ ಮತ್ತೆ ವಿಚಾರಿಸಿದರು. ನಾರಾಯಣಸ್ವಾಮಿ ಹೌದು ಎಂದು ಅದನ್ನೇ ಪುನರುಚ್ಚಸಿದರು.

ನನಗೆ ಸ್ವಲ್ಪ ರೇಗಿ, ಆಲೂಗೆಡ್ಡೆ ಬೆಳೆದರೆ ಏನು ತಪ್ಪು? ಎಂದು ನೈಪಾಲರನ್ನು ಕೇಳಿದೆ. ಅವರು, 'ಛೆ! ಛೆ! ಏನೂ ಇಲ್ಲ' ಎಂದರೂ, ತಮ್ಮಲ್ಲೇ ಮಂತ್ರದಂತೆ 'ಪೊಟೆಟೋಸ್, 1953' ಎಂದು ಹಲವಾರು ಬಾರಿ ಹೇಳಿಕೊಳ್ಳುತ್ತಿದ್ದರು. ಇನ್ನೂ ಈ ಕಿವಿಯಲ್ಲಿ ಏನೇನು ಕೇಳಿಸಿಕೊಳ್ಳಬೇಕೋ ಎಂಬಂತೆ ವಿಷಾದದಿಂದ ಕೂತಿದ್ದರು. ಸ್ವಲ್ಪ ಹೊತ್ತು ಅದೂ ಇದು ವಿಚಾರಿಸಿದಂತೆ ಮಾಡಿ, ನಾರಾಯಣ ಸ್ವಾಮಿ ಅವರನ್ನು ತುಂಬ ವಂದಿಸಿ ಕಳಿಸಿಕೊಟ್ಟರು.

ನಂತರ ನನಗೆ ಇಲ್ಲಿ ಅಂದರೆ ವೆಸ್ಟ್ ಎಂಡ್‌ನಲ್ಲಿ ಕಿತ್ತಳೆ ಹಣ್ಣಿನ ರಸ ತುಂಬ ಚೆನ್ನಾಗಿರುತ್ತೆ, ಕುಡಿಯೋಣ ಎಂದರು. ಬಕಾಸುರನಂತೆ ತಿನ್ನುವ ನನಗೆ ಈವಯ್ಯ ಊಟ ಕೊಡಿಸದ ಬಗ್ಗೆ ತೀವ್ರ ನಿರಾಶೆಯಾಗಿ, 'ಏಕೆ, ಮಧ್ಯಾಹ್ನ ಊಟಮಾಡುವುದಿಲ್ಲವೆ?' ಎಂದು ವಿಚಾರಿಸಿದೆ. ನೈಪಾಲ್ ತಮಗೆ ಗೂರಲಿರುವುದರಿಂದ ಮಧ್ಯಾಹ್ನ ಅಚ್ಚು ಕಟ್ಟಾಗಿ ಊಟ ಮಾಡಿಬಿಟ್ಟರೆ, ಉಬ್ಬಸವಾಗಿ ಆಕಡೆ ನಿದ್ದೆಯೂ ಬರದೆ, ಈ ಕಡೆ ಕೆಲಸವೂ ಮಾಡಲಾಗದೆ, ಒದ್ದಾಡುವಂತಾಗುವುದ ರಿಂದ ಜ್ಯೂಸು ಗೀಸು ಅಂತ ಅಷ್ಟರಲ್ಲೇ ಮಧ್ಯಾಹ್ನದ ಭೋಜನ ಮುಗಿಸಿ ಬಿಡುತ್ತಾರೆಂದು ತಿಳಿಸಿದರು.

ನನಗೊಂದು ಹೊಸ ಪ್ರಪಂಚದ ಪರಿಚಯವಾಯಿತು. ನನ್ನ ಮನದಲ್ಲಿ ಪಾದರಸದಂತೆ ಚುರುಕಾಗಿರುವ ಐಎಎಸ್ ಅಧಿಕಾರಿ, ಅಧಿಕಾರಿಣಿಗಳು, ಜಾಹಿರಾತು ಸಂಸ್ಥೆಯ ಎಕ್ಸಿಕ್ಯೂಟಿವ್‌ಗಳು, ಕಂಪನಿ ವೈಸ್ ಚೇರ್ಮನ್‌ಗಳು ಹಾದು ಹೋಗಿ, ಅವರ ಯಶಸ್ಸಿನ ಗುಟ್ಟು ರಟ್ಟಾಯಿತೆಂದೇ ತಿಳಿದೆ. ನೈಪಾಲನಷ್ಟೆ ಗೂರಲು ನನಗೂ ಇದ್ದರೂ ಮಧ್ಯಾಹ್ನ ಭೋಜನ, ನಿದ್ದೆ ಆಗದಿದ್ದರೆ ಬದುಕಿದ್ದೂ ಪ್ರಯೋಜನವಿಲ್ಲ ಎಂದು ನಂಬಿದ್ದ ನನಗೆ, ಭೋಧಿಸತ್ವದ ಮರದ ಕೆಳಗೆ ಬುದ್ಧನಿಗೆ ಜ್ಞಾನೋದಯವಾದಂತೆ, ವೆಸ್ಟ್‌ಎಂಡಿನ ಹೋಟೆಲಿನಲ್ಲಿ ಮಿಂಚಿನಂತೆ ಹೊಳೆದದ್ದು, 13 ವರ್ಷಗಳ ನಂತರ ಈಗಲೂ ಆ ದಾರಿ ಹಿಡಿಯಲಾಗಿಲ್ಲ.

ಕಿತ್ತಳೆ ಹಣ್ಣಿನ ರಸ ಶ್ರೇಷ್ಠಮಟ್ಟದಲ್ಲಿದ್ದರೂ ಮಾತಿನ ಆವೇಗದಲ್ಲಿ ಎರಡರಲ್ಲಿ ಒಂದು ಗ್ಲಾಸು ಬೀಳಿಸಿಬಿಟ್ಟೆ. ಅದು ಟೇಬಲ್ ಮೇಲೆ ಚೆಲ್ಲಿ, ಬಹುಪಾಲು ನನ್ನ ಪ್ಯಾಂಟಿನ ಮೇಲೆಯೇ ಸೋರಿತ್ತು. ಆದರೂ ನೈಪಾಲ್ (ಇವನನ್ನು ನಾಯಿಪಾಲ ಎಂದು ಕರೆಯುವುದೇ ಸರಿಯಾದ ಉಚ್ಚಾರಣೆ ಎಂದು ಹೇಳುವವರಿದ್ದಾರೆ. ಇದು ಒಂದು ರೀತಿ ಭಾರತೀಯರು ತಮ್ಮ ಸೇಡು ತೀರಿಸಿಕೊಳ್ಳುವ ಶೈಲಿ ಎನ್ನಿಸುತ್ತೆ) ನಾನು ಅಲ್ಲಿ ಬಾಂಬ್ ಬೀಳಿಸಿದ ರೀತಿ ವರ್ತಿಸಿ, ಎಂದು ನಿಂತು ಕೈ ಮೇಲಕ್ಕೆತ್ತಿ, ನಾಟಕೀಯವಾಗಿ ನೃತ್ಯ ಮಾಡುತ್ತ, 'ಬೇರರ್, ಬೇರರ್, ಮ್ಯಾನೇಜರ್, ಮ್ಯಾನೇಜರ್ ಓ ಮೈ ಗಾಡ್, ಮೈ ಗಾಡ್, ದೇರ್ ಈಸ್ ಎನ್ ಆಕ್ಸಿಡೆಂಟ್ ಹಿಯರ್ ಎನ್ ಎಕ್ಸಿಡೆಂಟ್, ಮೈಗಾಡ್' ಎಂದು ಕೂಗತೊಡಗಿದರು. ಎಲ್ಲರೂ ನನ್ನ ಕಡೆ ಅಪರಾಧಿಯಂತೆ ನೋಡಲಾರಂಭಿಸಿದರು. ತೀವ್ರವಾದ ಅವಮಾನ, ಅಸಹಾಯಕತೆಯಲ್ಲಿ ನಾನು ನೈಪಾಲ್ ಮೇಲೆ ಕೂಗತೊಡಗಿದೆ. ಚೆಲ್ಲಿದ್ದೆಲ್ಲ ನನ್ನ ಪ್ಯಾಂಟಿನ ಮೇಲೆ ಹೆಚ್ಚು ಬಿದ್ದಿದ್ದರಿಂದ ನಾನೇ ಸುಮ್ಮನಿದ್ದಾಗ ನೀವೇಕೆ ಇಷ್ಟೊಂದು ಡ್ರಾಮಾ ಮಾಡುತ್ತೀರಿ ಎಂದೆ. ಅವರು ಗಾಡ್, ಗಾಡ್, ಆಕ್ಸಿಡೆಂಟ್ ಆಕ್ಸಿಡೆಂಟ್ ಎಂದು ಉಚ್ಚರಿಸುತ್ತಲೇ ಇದ್ದರು. ಇಬ್ಬರು ಬೇರರ್ ಬಂದು ನಾವಿಬ್ಬರು ಪಕ್ಕದ ಟೇಬಲ್‌ನಲ್ಲಿ ಕುಳಿತಲ್ಲಿ ಅವರು ಎಲ್ಲ ಸರಿಪಡಿಸುವೆ ಎಂದರು. ನಾವೆದ್ದು ಪಕ್ಕದ ಟೇಬಲ್‌ನಲ್ಲಿ ಕುಳಿತು ನಮ್ಮ ಟೇಬಲ್ ಕಡೆ ತಿರುಗಿದಾಗ ಆಶ್ಚರ್ಯಕರ ರೀತಿಯಲ್ಲಿ ನಮ್ಮ ಓರಿಜಿನಲ್ ಟೇಬಲ್ ಕ್ಲೀನ್ ಆಗಿತ್ತು, ಬರುವಾಗ ಕೈಯಲ್ಲೇ ಒಬ್ಬ ಹೊಚ್ಚ ಹೊಸ ಟೇಬಲ್ ಕ್ಲಾತ್ ತಂದಿದ್ದ. ಹಳೆಯದನ್ನು



ನಾನೇ ನಿಜವಾದ ಸಿ.ಎಂ.......!



ಜನತಾದಳದ ವಿಚಿತ್ರ ತಳಮಳಕ್ಕೆ ಕಾರಣ.....

ಎತ್ತುತ್ತಿದ್ದಂತೆ ಒಮ್ಮೆ ಅದರಿಂದಲೇ ಟೇಬಲ್ ಒರೆಸಿ ಇನ್ನೊಂದನ್ನು ಹಾಸಿ ಬಿಟ್ಟಿದ್ದ. ಕೆಳಗಡೆ ಬಿದ್ದ ರಸವನ್ನು ಮತ್ತೊಬ್ಬ ಅದೇ ಹಳೆಯ ಟೇಬಲ್ ಕ್ಲಾತ್‌ನಿಂದಲೇ, ಕಾಲಿನಿಂದಲೇ ಒರೆಸಿಬಿಟ್ಟ. ನಮಗಂತೂ ಅಲ್ಲಿ ಒಂದು ಘಟನೆ ಈಗ ತಾನೆ ನಡೆಯಿತು ಎಂದು ನಂಬಲೂ ಕಷ್ಟವಾಗುತ್ತೆ.

ಈ ಘಟನೆಯಿಂದ ನೈಪಾಲ್ ದ್ವಂದ್ವ ಅರ್ಥವಾಯಿತು. ಮಿಕ್ಕ ಶ್ರೀಮಂತ ಭಾರತೀಯರಾಗಿದ್ದಾರೆ. ಸುಮ್ಮನೆ ಬೇರರ್‌ನನ್ನು ಕರೆಯುತ್ತಿದ್ದರು. ಈ ವಿಷಯದಲ್ಲಿ ನೈಪಾಲ್ ವಿದೇಶಿಯನಂತೆ, ತಪ್ಪಿತಸ್ಥನಂತೆ ವರ್ತಿಸಿದ್ದರು. ನಂತರ ಅದು ಅವರ ತಪ್ಪಲ್ಲದಿದ್ದರಿಂದ ನನ್ನ ಇರು ಸುಮುರುಸಿನಿಂದ ಸ್ವಲ್ಪ ಮಜ ಪಡೆಯಲು ಅಪ್ಪಟ ಭಾರತೀಯನಂತೆ ಓವರ್ ರಿಯಾಕ್ಟ್ ಮಾಡಿದ್ದರು. ನಾರಾಯಣ ಸ್ವಾಮಿ ಸರಿಹೋಗಲಿಲ್ಲವೆಂದು, ಜೀವರಾಜ ಆಳ್ವ ಅವರನ್ನು ನೈಪಾಲರಿಗೆ ಭೇಟಿ ಮಾಡಿಸಿದೆ.

ಇದರ ಮೊದಲು ಆಳ್ವ ಅವರ ಮನೆಯಲ್ಲಿ ಉಪಹಾರ ಮಾಡುವಾಗ ಅವರ ತಂದೆ ನಾಗಪ್ಪ ಆಳ್ವ ಅವರಿಂದ ಎಲ್ಲರೂ ಕೊರೆಸಿಕೊಳ್ಳಬೇಕಾಯಿತು. ಜೀವರಾಜ ಸಹೋದರಿಯನ್ನು ಓರೆಗಣ್ಣಿನಲ್ಲೇ ಗಮನಿಸಿ ನನ್ನ ಬಳಿ ಆಕೆ ಸುಂದರ ಮಹಿಳೆ ಎಂದರು. ಜೀವರಾಜನ್ನು ಭೇಟಿಯಾದ ಕೆಲವೇ ನಿಮಿಷಗಳಲ್ಲಿ ಈತ ಸ್ತ್ರೀ ಲೋಲನೆ? ಎಂದು ಕೇಳಿದರು. ಹೇಗೆ ತಿಳಿಯಿತು ಎಂದು ಕೇಳಿದಾಗ ಅವನ ಚಲನವಲನ, ಹಾವಭಾವ ಹೆಣ್ಣಿಗನಂತಿದೆ. ಅತಿ ಸ್ತ್ರೀಮೋಹದಿಂದಲೂ ಹೆಣ್ಣಿಗತನ ಬರಲು ಸಾಧ್ಯ ಎಂದು ವಿವರಿಸಿದರು.

ನೈಪಾಲರ ಪುಸ್ತಕ ಎರಡು ವರ್ಷಗಳ ನಂತರ ಹೊರಬರುವುದರಿಂದ ಹಾಗೂ ಅದು ಪ್ರಮುಖವಾಗಿ ಹೊರದೇಶದ ಓದುಗರಿಗೆಂದೇ ಬರೆಯುವ ಪುಸ್ತಕವಾದ್ದರಿಂದ ಇದುವರೆಗೂ ಸ್ಥಳೀಯ ಪತ್ರಿಕೆಗಳಿಗೆ ಹೇಳದ ಘಟನೆಗಳನ್ನು ಅವರಿಗೆ ತಿಳಿಸಬೇಕಾಗಬಹುದು, ಅವುಗಳನ್ನು ಅಪ್ಪಿತಪ್ಪಿಯೂ ನಾನು ಕೆಲಸ ಮಾಡುತ್ತಿದ್ದ ದಿನಪತ್ರಿಕೆಯಲ್ಲಿ ಪ್ರಕಟಿಸಬಾರದೆಂಬ ಷರತ್ತಿನಿಂದ ಆಳ್ವ ಮಾತು ಆರಂಭಿಸಿದರು.

ಮುಂದೆ ಸುಮಾರು ಹೊತ್ತು ನನ್ನ ಬಾಯಲ್ಲಿ, ಆ ಕಾಲಕ್ಕೆ, ನೀರು ಬರುವಂತಹ ಸ್ಕೂಪ್ ಸುದ್ದಿಗಳನ್ನು ಒಂದರ ಮೇಲೊಂದರಂತೆ ಬಿತ್ತರಿಸಲಾರಂಭಿಸಿದರು. ಅದರಲ್ಲಿ ಒಂದು ಹೆಗಡೆಯವರು ಮುಖ್ಯಮಂತ್ರಿಯಾಗಿದ್ದಾಗ, ಎಲ್ಲವನ್ನು ತಾವೇ ನೋಡಿಕೊಳ್ಳುತ್ತಿದ್ದುದು ಒಂದು ರೀತಿಯ ಡಿ-ಫಾಕ್ಟೋ ಚೀಫ್ ಮಿನಿಸ್ಟರ್ ತಾವೇ ಆಗಿದ್ದರೆಂದು ಈ ಅವತಾರದಲ್ಲಿ ಕಾಂಗ್ರೆಸ್ಸಿನವರು ಆಗಿನ ಜನತಾಪಕ್ಷದ ಸದಸ್ಯರನ್ನು ಕೊಂಡು ಸರ್ಕಾರಕ್ಕೆ ವಿಪತ್ತು ತರುವ ಹುನ್ನಾರದಲ್ಲಿದ್ದಾಗ, ತಾವು ಅನಿವಾರ್ಯವಾಗಿ ಟೆಲಿಫೋನ್ ಟ್ಯಾಪ್ ಮಾಡಿಸಬೇಕಾಯಿತೆಂದೂ ತಿಳಿಸಿದರು. ಮುಂದೆ ಹಗರಣದಿಂದಾಗಿಯೇ ಹೆಗ್ಡೆ ತೊಂದರೆಗೆ ಸಿಕ್ಕಿಕೊಂಡರಿಂದ ನೈಪಾಲ್‌ಗೆ ಕರ್ನಾಟಕದ ರಾಜಕೀಯ ಹಿನ್ನೆಲೆ ಬರೆಯಲು ಒಳ್ಳೆ ಸರಕು ಆಗಬಹುದೆಂದು ತಿಳಿದು ಅವರ ಕಡೆ ನೋಡಿದೆ. ಅವರು ತಮ್ಮ ಮಾಮೂಲು ಬೆರಗಿನಲ್ಲಿ ಆಳ್ವ ಮಾತನ್ನು ಕೇಳಿಸಿಕೊಳ್ಳುತ್ತಿದ್ದರು.

ಆಳ್ವ ಅವರನ್ನು ಏನನ್ನು ಪ್ರಶ್ನಿಸಲಿ ಎಂದು ನೈಪಾಲ್ ಮೊದಲೇ ಕೇಳಿದ್ದಾಗ, ನನಗೆ ಆಗ ಆಶ್ಚರ್ಯವಾಗುತ್ತಿದ್ದ ಅಂಶವನ್ನು ಹೇಳಿದ್ದೆ. ಹೋಂ ಮಿನಿಸ್ಟ್ರಿ ತಮ್ಮಲ್ಲೇ ಇದ್ದು, ಇಡೀ ಪೊಲೀಸ್ ಶಕ್ತಿ ಕೈಯಲ್ಲಿದ್ದಾಗ ಗೂಂಡಾಗಳ ಅವಶ್ಯಕತೆ ಏಕೆ ಎಂಬುದು ನನಗರ್ಥವಾಗಿರಲಿಲ್ಲ. ಇದನ್ನೇ ಆಳ್ವರನ್ನು ಕೇಳಬಹುದು ಎಂದು ಸೂಚಿಸಿದ್ದೆ. ನೈಪಾಲ್ ಇದರ ಬಗ್ಗೆ ವಿಚಾರಿಸಿದಾಗ ಆಳ್ವ ಕೆಲವು ಸಲ ಗೂಂಡಾಗಳ ಅವಶ್ಯಕತೆ ಬಗ್ಗೆ, ಕೆಲವು ಸಲ ಅದು ಬೇಕಿಲ್ಲದಾಗ್ಗೆ ಸ್ವಾರಸ್ಯ ಪ್ರಸಂಗದೊಂದಿಗೆ ವಿವರಿಸಿದರು.

ಹೆಗ್ಡೆಗೆ ಇಂಟಲಿಜನ್ಸ್ ಅಧಿಕಾ ಮೂಲಕ ಯಾರ್‍ಯಾರು ಪಕ್ಷ ತೊರೆದು ಕಾಂಗ್ರೆಸ್‌ಗೆ ಹಾರಬಹುದು ಎಂಬುದರ ಬಗ್ಗೆ ವಿವರವಿತ್ತು. ಒಮ್ಮೆ ಆಳ್ವ ತಮ್ಮ ಸ್ನೇಹಿತರೊಂದಿಗೆ ಆಗಿದ್ದ ನ್ಯಾಸ್‌ಕಿಂಗ್ ಹೋಟೆಲಿನಲ್ಲಿ ವಿರಮಿಸುತ್ತಿದ್ದಾಗ ಹೆಗ್ಡೆ ಫೋನಿನಲ್ಲಿ 'ಅಲ್ಲಿ ಆ ಶಾಸಕ ಪಕ್ಷ ತೊರೆಯುವುದರಲ್ಲಿದ್ದಾನೆ. ನೀವು ಇಲ್ಲಿ ಮಜಾ ಉಡಾಯಿಸುತ್ತಿದ್ದೀರಿ. ಹೋಗಿ ಸ್ವಲ್ಪ ಅವನ ರಿಪೇರಿ ಮಾಡಿ' ಎಂದು ಬೈದರಂತೆ. ಆಗ ರಾಜ್ಯ ಗೃಹ ಖಾತೆಯ ರಾಜ್ಯ ಸಚಿವರಾಗಿದ್ದ ಜಿಗಜಿಣಗಿಯೊಂದಿಗೆ ಆ ಶಾಸಕನನ್ನು ಹುಡುಕುತ್ತ ಹೋದರಂತೆ. ಜಿಟಿಜಿಟಿ ಮಳೆ ತಾನು ಯಾರೆಂದು ಯಾರಿಗೂ ತಿಳಿಯದಂತೆ ಜಿಗಜಗಣಗಿ ಮುಖಪೂರ್ತಿ ಮಫ್ಲರ್‌ನಿಂದ ಮುಚ್ಚಿ ಕೊಂಡಿದ್ದರಂತೆ. ಆ ಶಾಸಕ ಮನೆಯಲ್ಲಿಲ್ಲದೆ ನಗರದ ಹೊರವಲಯದಲ್ಲಿದ್ದ ಸ್ಲಂವೊಂದರಲ್ಲಿ ಒಂದು ಹೆಂಗಸಿನ ಸಂಪರ್ಕವಿದ್ದರಿಂದ ಅಲ್ಲಿ ಹುಡುಕಲು ಆಳ್ವ ರಾಜ್ಯ ಗೃಹಸಚಿವರನ್ನು ಪಕ್ಕದಲ್ಲಿ ಕೂಡಿಸಿಕೊಂಡು ತಾವೇ ಡ್ರೈವ್ ಮಾಡುತ್ತ ಸಾಗಿದರಂತೆ.

ಮುಂದೆ ಸಾಗಲು ಆಗುವ ತನಕ ಕಾರಿನಲ್ಲಿ ತೆರಳಿ, ಬಂಡೆಯೊಂದು ಅಡ್ಡ ಬಂದಾಗ ಏನು ಮಾಡಲೂ ತಿಳಿಯದೆ ಸುಮ್ಮನೆ ಕಾರಿನಲ್ಲಿ ಕುಳಿತಿದ್ದಾಗ, ಬೀಟ್‌ನಲ್ಲಿದ್ದ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಲಾಠಿಯನ್ನು ಇವರ ಕಾರಿನ ಬಾನೆಟ್ ಮೇಲೆ ಕುಟ್ಟುತ್ತ, ಆ ಸ್ಥಳದಲ್ಲಿ ಆ ವೇಳೆಯಲ್ಲಿ ಇವರಿಬ್ಬರು ಏನು ಮಾಡುತ್ತಿದ್ದರು ಎಂದು ವಿಚಾರಿಸಿ, ಸಭ್ಯಸ್ಥರು ಅಲ್ಲಿ ಬರಕೂಡದೆಂದೂ, ಇನ್ನು ಹೆಚ್ಚು ಹೊತ್ತಿದ್ದರೆ ಅವರಿಬ್ಬರನ್ನು ಸ್ಟೇಷನಿನ್ನಲ್ಲಿ ಒಳಗೆ ಹಾಕುವೆನೆಂದು ಹೆದರಿಸಿದನಂತೆ. ಕಾರೂಳಗೆ ರಾಜ್ಯ ಗೃಹ ಸಚಿವರಿದ್ದರೂ ಹೇಳಿಕೊಳ್ಳುವಂತಿರಲಿಲ್ಲ, ರಿವರ್ಸ್ ಮಾಡಿ, ಅಲ್ಲಿನ ಠಾಣೆಗೆ ಬಂದು, ಅಲ್ಲಿನ ಪಿಸಿಯ ಮೂಲಕ ಅದೇ ಸಬ್ ಇನ್ಸ್‌ಪೆಕ್ಟರನ್ನು ಕರೆಸಿ, ಆ ಶಾಸಕನನ್ನು ಹುಡುಕಲು ಕಳಿಸಿದರಂತೆ. ಏಕವಚನದಲ್ಲಿ ಹೆದರಿಸಿದ್ದ ಸಬ್ ಇನ್‌ಸಪೆಕ್ಟರ್ ಈಗ ಸೆಲ್ಯೂಟ್ ಹೊಡೆದು ಅರ್ಧಗಂಟೆಯಲ್ಲಿ ಆ ಶಾಸಕನನ್ನು ಆ ಮಹಿಳೆಯ ಗುಡಿಸಿನಲ್ಲಿ ಪತ್ತೆ ಹಚ್ಚಿ ಕರೆದುಕೊಂಡು ಬಂದನಂತೆ.

ನೈಪಾಲ್ ಶಾಸಕ ಪಕ್ಷ ತೊರೆಯದಿರಲು ಎಷ್ಟು ಖರ್ಚಾಯಿತೆಂದು ಕೇಳಿದರು. ಸ್ವಲ್ಪ ಹಿಂದೆಮುಂದೆ ನೋಡಿ ಅಳ್ವ ಒಂದೂವರೆ ಲಕ್ಷ ರೂಪಾಯಿ ಎಂದರು. ಅವನ ವಿರುದ್ಧ ಸಿದ್ಧಪಡಿಸಿದ್ದ ರಹಸ್ಯ ಫೈಲ್‌ನಲ್ಲಿ ಪೇಚಿಗೆ ಸಿಕ್ಕಿಕೊಳ್ಳುವಂತಹ ಕೆಲವು ವಿಷಯಗಳಿದ್ದರಿಂದ ಒಂದೂವರೆ ಲಕ್ಷದಲ್ಲೇ ಈ ಕೆಲಸ ಮುಗಿಸಲು ಸಾಧ್ಯವಾಯಿತೆಂದು ಆಳ್ವ ತಿಳಿಸಿದರು. ಇದು ಗೂಂಡಾಗಳ ಅವಶ್ಯಕತೆ ಇಲ್ಲದ ವಿಚಾರ. ಕೆಲವು ಸಲ ಪಕ್ಷದಲ್ಲೇ ರಿಬೆಲ್ ಆಗುವವರನ್ನು ಹೆದರಿಸಲು ಪ್ರತಿಪಕ್ಷಗಳ ಸದಸ್ಯರನ್ನು ಮಟ್ಟಹಾಕಲು ಅಧಿಕೃತವಾಗಿ ಪೊಲೀಸ್ ಶಕ್ತಿ ಉಪಯೋಗಿಸುವಂತಿಲ್ಲದ್ದರಿಂದ, ಹಾಗೂ ಪಾರ್ಟಿಸಭೆಗಳಲ್ಲಿ ಜನತರಲು ಗುಂಡಾಗಳ ಅವಶ್ಯಕತೆ ಇದೆ ಎಂದಿದ್ದರು.

ಆಳ್ವ ಎದ್ದು ಹೋದ ಮೇಲೆ ನೈಪಾಲ್ ಕಡೆ ಕೆಕ್ಕರಿಸಿ ನೋಡುತ್ತ, 'ಹೆಂಗೆ ನಮ್ಮ ಮಿನಿಸ್ಟ್ರು? ಸಾಕಷ್ಟು ರಂಜನೀಯ ವಿಷಯ ದೊರೆಯಿತೇ?' ಎಂದು ಛೇಡಿಸುತ್ತ ಕೇಳಿದೆ. ಅವರು, 'ಡಿಡ್ ಯು ನೋಟೀಸ್ ದಟ್ ಐ ಡಿಡ್ ನಾಟ್ ಟೇಕ್ ಎ ಸಿಂಗಲ್ವ್‌ರ್ಡ ಆಫ್ ನೋಟ್ಸ್?' ಎಂದರು. ನಾನು ಗಮನಿಸಿರಲ್ಲಿಲ್ಲ. 'ನಾಟ್ ಎ ವರ್ಡ್' ಎಂದು ಹೇಳಿ ಆಳ್ವರನ್ನು ತಿರಸ್ಕರಿಸಿದ್ದರು. ಮೊದಲೇ ನಿರ್ಧರಿಸಿ ಅವರು ಬರೆಯಬೇಕಿದ್ದ ಭಾರತದ ರಾಜಕೀಯ ಸ್ಥಿತಿ ಆಳ್ವ ಆಡಳಿತ ಶೈಲಿಗೆ ತಾಳೆಯಾಗಿಲ್ಲ ಎಂದು ತಿಳಿದು ಸುಮ್ಮನಾದೆ. ಇದಾದ ಮೇಲೆ ನನಗೆ ಈ

ಹೋಟಲಿನಲ್ಲಿ ಅತ್ಯುತ್ತಮವಾದ, ಆರೋಗ್ಯಕ್ಕೆ, ಅದರಲ್ಲೂ ಗೂರಲಿರುವರಿಗೆ ಒಳ್ಳೆಯದಾದ 'ಮಲ್ಗಟಾನಿ ಸೂಪ್' ಮಾಡುತ್ತಾರೆಂದೂ ಹೇಳಿ, ಆ ಸೂಪಿಗೆ ಆರ್ಡರು ಕೊಟ್ಟರು. ಇದು ಯಾವದಪ್ಪ ನಾನು ಕೇಳಿಲ್ಲದ ಸೂಪು ಎಂದು ಕುತೂಹಲದಿಂದ ಕಾದೆ. ಬಂದದ್ದು ಗಟ್ಟಿಯಾದ ಬಿಸಿ ಬಿಸಿ ಮೆಣಸಿನ ಕಷಾಯ. ಮೋಸ ಹೋಗಿರಬೇಕೆಂದು ಮೆನು ಕಾರ್ಡಿನ ಮೇಲೆ ಮತ್ತೆ ಕಣ್ಣಾಡಿಸಿದೆ. ಅಲ್ಲಿ ಸ್ಪಷ್ಟವಾಗಿ ಬರೆಯಲಾಗಿತ್ತು; ಮಳಗಾ ತಣ್ಣಿ ಸೂಪ್ ಎಂದು ಇಂಗ್ಲಿಷ್‌ನಲ್ಲಿತ್ತು. ಒಟ್ಟಿಗೆ ಸೇರಿಸಿ ಏಕಪದದಂತೆ ಪ್ರಕಟಿಸಿದ್ದರಿಂದ ಅದು ಮಲ್ಗಟಾನಿ ಸೂಪ್ ಎಂದಾಗಿತ್ತು. ತಮಿಳಿನಲ್ಲಿ ಮಳಗಾ ತಣ್ಣಿ ಎಂದರೆ ಮೆಣಸಿನ ನೀರು!! ಸಾಧಾರಣವಾಗಿ ಮಕ್ಕಳಿಗೆ ಕೆಮ್ಮು ಬಂದಾಗ ಹಿರಿಯರು ಮನೆಯಲ್ಲಿ ಕೊಡುತ್ತಿದ್ದದೂ ಇದೇ! ಅಂತೂ ನೈಪಾಲ್‌ರ ಸನ್ನಿಹದಲ್ಲಿ ಒಂದರಮೇಲೊಂದರಂತೆ ಜ್ಞಾನೋದಯವಾಗುತ್ತಿತ್ತು.

ಆಳ್ವರೂ ತಿರಸ್ಕೃತರಾದ ಮೇಲೆ ನಾನು ನೈಪಾಲರನ್ನು ಎಂ.ಪಿ ಪ್ರಕಾಶರ ಬಳಿಗ ಕೊಂಡೊಯ್ದೆ. ನಾಟಕದ ಅನುಭವವೂ ಇದ್ದು ತಮ್ಮ ಆಲೋಚನೆಗಳನ್ನು ಅಭಿನಯಪೂರ್ವಕವಾಗಿ ಅಡೆತಡೆ ಇಲ್ಲದೆ ಮತ್ತೊಬ್ಬರ ಪ್ರತಿಕ್ರಿಯೆಗೆ ಕಾಯದೆ ಡೈಲಾಗ್ ಡೆಲಿವರಿ ಮಾಡುವುದರಿಂದ ಪ್ರಕಾಶ ಅವರು ನೈಪಾಲರಿಗೆ ಕರ್ನಾಟಕದ ಎಲ್ಲ ರಂಗದ ಬಗ್ಗೆ ಹಾಸಲುಂಟು, ಹೊದೆಯಲುಂಟು ಎಂಬಂತೆ ಸುಸ್ತು ಮಾಡಿ ಬಿಡಬಹುದು ಎಂದು ತಿಳಿದಿದ್ದೆ.

ಪ್ರಕಾಶರನ್ನು ಏನನ್ನು ಕೇಳೋಣ ಎಂದು ನೈಪಾಲ್ ಕೇಳಿದಾಗ ನಾನು ಏನೂ ತೋಚದೆ ರಾಜಕೀಯದಲ್ಲಿ ಬೇರೆಯಾರು ಇಲ್ಲದಷ್ಟು ವಕೀಲರು ಇರುವುದರಿಂದ ಇದಕ್ಕೆ ಕಾರಣ ಕೇಳೋಣ ಎಂದೇ ನಮ್ಮ ಹರಟೆ ಈ ಬಾರಿ ವೆಸ್ಟ್ ಎಂಡ್ ಬಿಟ್ಟು, ಪ್ರಕಾಶರ ಅಧಿಕೃತ ಮನೆಯಿಂದ ಆರಂಭವಾಗಿ ಕುಮಾರ ಕೃಪದಲ್ಲಿ ಮುಂದುವರಿದಿತ್ತು. ನೈಪಾಲರು ನಾನು ಸೂಚಿಸಿದ ಪ್ರಶ್ನೆ ಕೇಳಿದಾಗ ಪ್ರಕಾಶರು ನನ್ನನ್ನು ಏನೆಂದು ಹೇಳುವುದ್ರೀ ಎಂದು ನನ್ನನ್ನೇ ಕೇಳಿದರು. ನಿಮ್ಮ ಅನುಭವ ಹೇಳಿ ಎಂದೆ. ತುಸು ಯೋಚಿಸಿ, ಸಾಮಾನ್ಯವಾಗಿ ಜಿಲ್ಲೆಗಳಲ್ಲಿ ವಕೀಲರು ಹೆಚ್ಚು ಕಡಿಮೆ ಮಧ್ಯಾಹ್ನದ ಮೇಲೆ ಪುರುಸೊತ್ತಾಗಿರುವುದುರಿಂದ, ಹೆಚ್ಚು ಸಮಯ ಕೈಯಲಿದ್ದರಿಂದ ಬೇರೇನು ತೋಚದೆ ರಾಜಕೀಯದಲ್ಲೇ ತೊಡಗಿಕೊಳ್ಳುತ್ತಾರೆ ಎಂದು ಸಮರ್ಪಕವಾಗಿಯೇ ತಿಳಿಸಿದರು. ನಾವು ಮಾತನಾಡುತ್ತಿದ್ದಂತೆ ಹಲವಾರು ಕಾರುಗಳು ಕುಮಾರಕೃಪಕ್ಕೆ ಬಂದ ಶಬ್ದ ಬಂದರೂ ಕಾರಿನ ಬಾಗಿಲು ತೆಗೆಯುವ, ಹಾಕುವ ಶಬ್ದ ಬಿಟ್ಟರೆ ಬೇರೆ ಯಾವ ಸದ್ದೂ ಬರದಿದ್ದನ್ನು ಕಂಡು ನಾನು ಬಾಲ್ಕನಿ ಕಡೆ ಧಾವಿಸಿದಾಗ, ಸಿನಿಮಾದಲ್ಲಿ ಬರುವಂತೆ ಈಸ್ಟಮನ್ ಕಲರ್‌ನಲ್ಲಿ ಸ್ಲೋಮೋಷನಲ್ಲಿ ದೃಶ್ಯವೊಂದು ನಿರ್ಮಿತವಾಗುತ್ತಿತ್ತು. ನನ್ನ ಹಿಂದೆ ಪ್ರಕಾಶರು ನೈಪಾಲರು ಬಂದು ಬಗ್ಗಿ ನೋಡಿದರು.

ಸುಮಾರು ಆರೇಳು ಕಪ್ಪು ಬಣ್ಣದ ಕಾರುಗಳು ಒಂದರ ಹಿಂದೆ ಒಂದು ನಿಂತಿದ್ದವು. ಕೆಂಪು, ಬಿಳಿ, ಕಾವಿಬಣ್ಣದ ಟಿಬೇಟಿಯನ್ ಯುವಕ, ಯುವತಿಯರು ನಡು ಬಗ್ಗಿ ಮಾತಿಲ್ಲದೆ ನಿಂತಿದ್ದರು. ಒಂದು ಕಾರಿನಿಂದ ದಲೈಲಾಮಾ ಇಳಿದು ಅವರು ಮೌನದಲ್ಲಿ ಆ ಯುವಕ, ಯುವತಿಯರ ಮುಂದೆ ನಡುಬಗ್ಗಿಸಿ ನಿಂತರು. ಯಾರೂ ಮಾತಾಡದ ಮೌನ ಅಪ್ಯಾಯಮಾನವಾಗಿತ್ತು. ನಾವು ನಮ್ಮ ಸ್ಥಳಕ್ಕೆ ಹಿಂದಿರುಗಿದರೆ ಆ ವೇಳೆಗೆ ಮಹಡಿ ಹತ್ತಿದ್ದ ದಲೈಲಾಮಾರು ನಮ್ಮ ಮುಂದೆಯೇ ನಗುತ್ತ ಹಾದು ಹೋದರು. ತಮ್ಮ ಕೋಣೆಗೆ ಹೋದ ನಂತರ ಕಾಲೇಜು ಯುವಕರು ಸ್ನಾನ ಮಾಡುವಾಗ ಖುಷಿಗೆ ಮನಬಂದಂತೆ ದಲೈಲಾಮಾ ತಮ್ಮ ಏಕಾಂತದಲ್ಲಿ ಹಾಡಲಾರಂಭಿಸಿದರು. ಟಿಬೆಟ್ ಶೈಲಿಯಲ್ಲಿದ್ದ ಆ ಹಾಡೇ ಆವರೆಗೆ ಇದ್ದ ಮೌನ ಮುರಿದಿದ್ದು.

ಪ್ರಕಾಶರು ಅವರು ದಲೈಲಾಮಾ ಎಂದೂ, ಅವರನ್ನು ಭೇಟಿಮಾಡಲಿಚ್ಚಿಸುವಿರಾ ಎಂದು ಕೇಳಿದಾಗ ಆವರೆಗೆ ಒಂದು ಗುಂಗಿನಲ್ಲಿದ್ದು, ತಕ್ಷಣ ಎಚ್ಚೆತ್ತುಕೊಂಡು, 'ದಲೈಲಾಮಾ....?!' ಎಂದು, ನಾರಾಯಣಸ್ವಾಮಿ ಬಳಿ ಮಾತಾಡುವಾಗ, 'ಪ್ರೊ.... ಟೈ.... ಟ್ರೋ.... ಸ್?!' ಎಂದು ಪ್ರತಿ ಅಕ್ಷರ ಒತ್ತಿ ನುಡಿದಂತೆ ನುಡಿದರೂ ಕ್ಷಣಗಳ ನಂತರ ಭೇಟಿಯ ಅವಶ್ಯಕತೆ ಇಲ್ಲ ಎಂದರು. ಒಂದು ರೀತಿಯ ಕೀಳರಿಮೆ ಇರಬಹುದು, ಅಥವಾ ದಲೈಲಾಮರನ್ನು ಪ್ರಶ್ನೆ ಕೇಳಲು ಮಾನಸಿಕ ತಯಾರಿ ಇಲ್ಲದಿರಬಹುದು, ಅಥವಾ ತಮ್ಮ ಪುಸ್ತಕಕ್ಕೆ ದಲೈಲಾಮಾ ಅವಶ್ಯಕತೆ ಇಲ್ಲದಿರಬಹುದು. ಆದರೂ, ವೆಸ್ಟ್ ಇಂಡೀಸ್‌ನ ಪತ್ರಿಕೆಯೊಂದರಲ್ಲಿ ವರದಿಗಾರನಾಗಿ, ಉಪಸಂಪಾದಕನಾಗಿ ಅನುಭವವಿದ್ದು, ಅನುಭವದಿಂದಲೇ, ಹೇಳಬೇಕಾದನ್ನು ಕೆಲವೇ ಪದಗಳ ಸಣ್ಣ ಸಣ್ಣ ವಾಕ್ಯಗಳಲ್ಲಿ ಸೆರೆ ಹಿಡಿಯುವಂತೆ ಬರೆಯುವುದನ್ನು ಕಲಿತಿದ್ದು, ಲಾಮಾ ಅವರನ್ನು ಅನಾಯಾಸವಾಗಿ ಭೇಟಿಮಾಡುವ ಅವಕಾಶದ ಬಗ್ಗೆ ಒಬ್ಬ ವರದಿಗಾರನ ಕುತೂಹಲವೂ ಇಲ್ಲದಿದ್ದು ನನಗೆ ಆಶ್ಚರ್ಯವಾಯಿತು.

ಪ್ರಕಾಶರು ಮಾತಾಡುವಾಗ ನೈಪಾಲಕರು ಅವರಿಗೆ ಹಿಡಿಸಿದ ಒಂದು ಡೈರಿಯಲ್ಲಿ ಪೆನ್ನಿನ್ನಿಂದ 'M.P. Prakash Says these are more lawyers in politics because....' ಎಂದು ಉದ್ದಕ್ಕೆ ನಿಧಾನವಾಗಿ ಗುಂಡುಗುಂಡಾಗಿ ನೋಟ್ಸ್ ಮಾಡಿಕೊಳ್ಳುತ್ತಿದ್ದರು. ತಾವು ಆವೇಶದಲ್ಲಿ ಹೇಳಿದ ಮಾತನ್ನು ಮತ್ತೊಬ್ಬರು ರಿಪೀಟ್ ಮಾಡಿದಾಗ ಅದರ ಪರಿಣಾಮದ ಬಗ್ಗೆ ಹೇಳುವವರು ಗಂಭೀರವಾಗಿ ಆಲೋಚನೆ ಮಾಡುವಂತಾಗುತ್ತಿತ್ತು. ನನಗೆ ಇದು ಆಲೋಚನಾ ಧಾಟಿಯನ್ನು ತಡೆದಂತೆ ಆಗುತ್ತದೆ ಎಂದೆನಿಸುತ್ತಿತ್ತು. ತುಸು ಅಸಹನೆಯಲ್ಲೇ ನೈಪಾಲರಿಗೆ ಸುಮ್ಮನೆ ಕೇಳಿಸಿಕೊಳ್ಳಿ ಅಥವಾ ಟೇಪ್ ರೆಕಾರ್ಡರ್‌ನ್ನು ಉಪಯೋಗಿಸಿ ಎಂದು ಸೂಚಿಸಿದೆ. ನೈಪಾರು ಏಕೆ ಎಂದರು. ಸಾಮಾನ್ಯವಾಗಿ ಭಾರತೀಯರು ತಮ್ಮ ಬಗ್ಗೆ, ಕೆಲವು ವಿಷಯದ ಬಗ್ಗೆ, ಕೇಳಿದಾಗ ಪ್ರಪ್ರಥಮವಾಗಿ ಅದರ ಬಗ್ಗೆ ಆಲೋಚಿಸಿರುತ್ತಾರೆ. ಆದ್ದರಿಂದ ಅವರು ತಕ್ಷಣ ಏನಾದರೂ ಹೇಳಿದಾಗ ಮುಂದೆ ಮೈಸೂರಿಗೆ ಬೇರೆಯವರೊಡನೆ ಹೋಗಿ ಮೈಸೂರಿನ ಅರಮನೆಯಲ್ಲಿರುವ ದೇವಸ್ಥಾನದ ಅರ್ಚಕರನ್ನು ಭೇಟಿ ಮಾಡಿದರ ಬಗ್ಗೆ ನೈಪಾಲರು, 'ಆ ಮನುಷ್ಯ ಒಳ್ಳೆಯವನು. ಶಿಸ್ತಿನಿಂದ ಬದುಕಿದವನು. ಆದರೆ ಅವನ ಜೀವನವನ್ನು ಒಮ್ಮೆಯೂ ಅನಲೈಸ್ ಮಾಡಿರಲಿಲ್ಲ. ಈ ಬಗ್ಗೆ ಪ್ರಶ್ನೆ ಕೇಳಿದಾಗ ಆ ವಿಷಯದ ಬಗ್ಗೆ ಚಿಂತಿಸದಂತೆ ವರ್ತಿಸುತ್ತಿದ್ದರು' ಎಂದು ಬೇಸರದಿಂದ ಹೇಳಿದ್ದರು.

ಅದು ಸಮಯ ಸ್ಪೂರ್ತಿಯಿಂದ ಬಂದಿರುತ್ತೆ, ಹಾಗೂ ನಿಜ ಹೊರ ಬಂದಿರುತ್ತೆ. ಮಧ್ಯೆ ನೀವು ತಡೆದು ನೋಟ್ಸ್ ಮಾಡಿಕೊಂಡರೆ ಅವರು ಮಾತಿನ ಉದ್ವೇಗಕ್ಕೆ ತಡೆಬಂದು ಒಂದನ್ನು ಹೇಳಲು ಬದಲು ಇನ್ನೊಂದನ್ನು ಹೇಳಬಹದು ಎಂದೆ. ನೈಪಾಲ್ ಸುಮ್ಮನಿದ್ದರು, ಹಾಗೂ ಹೇಳುವವರು ನೀವು ಏನನ್ನು ಬರೆಯುತ್ತಿದ್ದೀರಿ ಎಂದು ನಿಮ್ಮ ನೋಟ್ಸ್ ಕಡೆಯೂ ಬಗ್ಗಿ ನೋಡುತ್ತಾರೆ ಎಂದು ಸೇರಿಸಿದೆ. ನೈಪಾಲರು ತಕ್ಷಣ, ಪರವಾಗಿಲ್ಲ ಪುಸ್ತಕ ಪೆನ್ನಿನ ಮೂಲಕ ಅವರ ಮೇಲೆ ಒದಗಿ ಬರುವ ಒಂದು ಹಿಡಿತ ನಾನು ಎಂಜಾಯ್ ಮಾಡುತ್ತೇನೆ' ಎಂದರು.

ನಂತರ ನನಗೆ ತಿಳಿಯಿತು. ಬೇರೆಯವರು ಹೇಳುವಾಗ ಅನ್ಯಮನಸ್ಕತೆಯಿಂದ ತಲೆ ಆಡಿಸುವುದು, ಉಡಾಫೆಯಲ್ಲಿ ಸರಿ ಸರಿ ಎನ್ನುವುದು ಒಂದು ರೀತಿ ಅಹಂಕಾರ. ಬರೆದುಕೊಂಡರೆ ತಮ್ಮ ಮಾತನ್ನು ಗಂಭೀರವಾಗಿ ಪರಿಗಣಿಸುತ್ತಿದ್ದಾರೆ ಎಂಬ ಗೌರವವು

## ಪಶುಗಳಿಗಿಂತ



ನಾನೇನ್ ಕಡಿಮೆ
ಎಂದು
ವಿದ್ಯಾರ್ಥಿಗಳೂ
ಹಾಕ್ತಾರೆ ಮೆಲಕ
ಬಾಯ್ನಲ್ಲಿ ಇಟ್ಕೊಂಡು
ಗುಟುಕ!!

■ ಹೆಚ್.ಎನ್.ಸೋಮಶೇಖರ್.

## ವ್ಯತ್ಯಾಸ



ನಾನೂ ಒಮ್ಮೊಮ್ಮೆ
ರಾಜಕಾರಣಿಯಾಗುವೆ
ಆಡಳಿತ ಚುಕ್ಕಾಣಿ ಹಿಡಿಯದೇ
ಆದರೆ
ಕೊಟ್ಟ ಭರವಸೆಗಳನು
ಈಡೇರಿಸದೇ!

■ ಮಂಜುನಾಥ ಸ್ವಾಮಿ ಕೆ.ಎಂ.

---

ಹೇಳುವವರಿಗೆ ಉಂಟಾಗುತ್ತೆ. ಮತ್ತು ಕೆಲವೇ ವಾಕ್ಯಗಳಲ್ಲಿ ಇಡೀ ಸಮಸ್ಯೆಯನ್ನು ಹೇಳುವ ಕಲೆ ಹೇಳುವವರಿಗೂ ಅಭ್ಯಾಸವಾಗುತ್ತೆ. ಹಾಗೂ ಬರವಣಿಗೆಯಲ್ಲಿ ಮಾನಸಿಕ ಹಾಗೂ ದೈಹಿಕ ಕ್ರಿಯೆಯ ಸಮ್ಮೇಳನವಾಗಿ ಬರುವ ಕ್ಲಾರಿಟಿ ಟೇಪ್‌ರೆಕಾರ್ಡರಲ್ಲಿ ಬರುವುದಿಲ್ಲ. ಹೀಗೆ ಅನುಭವಸ್ಥರಿಂದ ಕಲಿಯುವುದು ನಿತ್ಯವಾಡಿಕೆಯಾಗಿತ್ತು. ಇದಾದ ಮೂರು ದಿನಗಳ ನಂತರ ನೈಪಾಲರು ಕಲ್ಕತ್ತದಿಂದ ಫೋನಿನಲ್ಲಿ ಪ್ರಕಾಶರ ಜತೆ ಮಾಡಾಡಿದ್ದೆಲ್ಲ ಬರೆದು ನೋಡಿದರಂತೆ, ಸತ್ವವಿರಲಿಲ್ಲವಂತೆ. ಬೇರೆ ಯಾರಾದರೂ ರಾಜಕಾರಣಿ ಭೇಟಿ ಮಾಡಿಸಲು ಸಾಧ್ಯವೇ ಎಂದಿದ್ದರು. ಈ ವೇಳೆಗೆ ನನಗೆ ಕಛೇರಿಯಲ್ಲಿ ಇತರರು ಯಾರಾದರೂ ಅಪ್ಪಟ ರಾಜಕಾರಣಿ ಭೇಟಿ ಮಾಡಿಸಿ ಆ ಮುದುಕನನ್ನು ಸಾಗಹಾಕು ಎಂದೆನ್ನುವ ಮಟ್ಟಕ್ಕೆ ಬಂದಿದ್ದರು. ನಾನು ನಿತ್ಯ ನೈಪಾಲರನ್ನು ಯಾರೊಂದಿಗಾದರೂ ಭೇಟಿ ಮಾಡಿಸುವುದು, ಅದರ ನೋಟ್ಸಿನ ಆಧಾರದ ಮೇಲೆ ಅವರು ಬರೆದು ಸಾಲದು ಎನ್ನುವುದು ಹೀಗೆ ಹಿಡಿಸುವಂತಹ ಒಬ್ಬ ರಾಜಕಾರಣಿ ಭೇಟಿ ಮಾಡಿಸದಿದ್ದರ ಬಗ್ಗೆ ನನ್ನ ಸಹದ್ಯೋಗಿಗಳು ಆಡಿಕೊಳ್ಳುವ ಹಂತ ಮುಟ್ಟಿ, ನಾನೆಂತಹ ಪೊಲಿಟಿಕಲ್ ವರದಿಗಾರ ಎಂದು ಹಾಸ್ಯ ಮಾಡತೊಡಗಿದ್ದರು.

ನನ್ನ ಸಾಂತ್ವನಕ್ಕೆ ಬಂದವರು ನೈಪಾಲ್ ಜತೆ ಮದುವೆಯಾಗದೆ 23 ವರ್ಷದಿಂದ ಸಹಬಾಳ್ವೆ ನಡೆಸಿದ್ದ 40-45 ವರ್ಷದ ಮುಗ್ಧ ಧಡೂತಿ ಬ್ರಿಟಿಷ್ ಹೆಂಗಸು. ನಾನು ಒಳ್ಳೆಯವನೆಂದೂ ಆದರೆ ತಮ್ಮ ಮನಸ್ಸಿನಲ್ಲಿ ಏನಿದೆ ಎಂಬುದನ್ನು ಅರ್ಥ ಮಾಡಿಕೊಳ್ಳದೆ ಸರಿಯಾದವರನ್ನು ಭೇಟಿ ಮಾಡಿಸುತ್ತಿಲ್ಲವೆಂದೂ ನೈಪಾಲ್ ಅವಳ ಬಳಿ ಹೇಳಿದಾಗ ಆಕೆ, 'ನಿನ್ನ ಮನಸ್ಸಿನಲ್ಲಿ ಏನಿದೆ ಎಂದು ಹೇಳಿದರೆ ತಾನೆ ಅವನು ನಿನಗೆ ಸಹಾಯಮಾಡುವುದರಲ್ಲಿ ಯಶಸ್ವಿಯಾಗುವುದು? 23 ವರ್ಷವಾಯಿತು, ನನಗೇ ನಿಮಗೆ ಏನು ಬೇಕೆಂದು ಇನ್ನೂ ತಿಳಿದಿಲ್ಲ' ಎಂದು ನೈಪಾಲರನ್ನು ಛೇಡಿಸಿದರು. ಮುಂದೆ ಇಸ್ಲಾಂ ಬಗ್ಗೆ ಪುಸ್ತಕ ಬರೆಯಲು ಪಾಕಿಸ್ತಾನಕ್ಕೆ ನೈಪಾಲ್ ಭೇಟಿ ನೀಡಿದ್ದಾಗ, ವಿಷಯ ಸಂಗ್ರಹಿಸಲು ಅಲ್ಲಿನ ಹಿರಿಯ ಮತ್ತು ಶ್ರೀಮಂತ ಮಹಿಳಾ ಪತ್ರಕರ್ತೆಯೊಡನೆ ಓಡಾಡಿ ಅವಳನ್ನು ಸದ್ದಿಲ್ಲದೆ ಮದುವೆ ಯಾಗಿಬಿಟ್ಟರು. 23 ವರ್ಷದಿಂದ ಇಟ್ಟುಕೊಂಡಿದ್ದ ಬ್ರಿಟಿಷ್ ಮಹಿಳೆಗೆ ಸುಳಿವೂ ಸಿಗದೆ, ಒಂದು ಮಾತೂ ಹೇಳದೆ!!

ನೈಪಾಲರು ಕಲ್ಕತ್ತದಿಂದ ಹಿಂದಿರುಗಿದಾಗ ಸ್ವಲ್ಪ ಉದಾಸೀನದಲ್ಲಿ ಲೆಜಿಸ್ಲೇಟರ್ಸ್ ಹೋಮ್ ಲಾಂಜ್‌ನಲ್ಲಿ ನಾನೂ, ನೈಪಾಲ್ ಕೂತೆವು. ಎತ್ತರಕ್ಕೆ ಜುಬ್ಬ ಪಚ್ಚೆ ಉಟ್ಟಿದ್ದ ಭಾರಿ ಮೀಸೆ ಹೊತ್ತು ಓಡಾಡುತ್ತಿದ್ದ ಒಬ್ಬರನ್ನು ನೋಡಿದೆವು. ನೈಪಾಲ್ 'ಎಮ್ಮೆಲೇನೆ?' ಎಂದು ನನ್ನನ್ನು ಇಂಗ್ಲೀಷಿನಲ್ಲಿ ಕೇಳಿದರು. ನಾನು ಅವರನ್ನು ಕನ್ನಡದಲ್ಲಿ 'ನೀವು ಎಮ್ಮೆಲೇನೇನ್ರಿ?' ಎಂದು ಕೇಳಿದೆ. ಅವರು 'ಹೌದ್ರಿ' ಎಂದು ಸಂಭ್ರಮದಿಂದ ಠೀವಿಯಿಂದ ಹೇಳಿದರು. ನೈಪಾಲ್ ತಲೆ ಒಪ್ಪಿಗೆ ಸೂಚಿಸಿದರು. ನಾನು ನೈಪಾಲರನ್ನು ಪರಿಚಯಿಸಿ ನಾವು ಅಲ್ಲಿಗೆ ಬಂದ ಉದ್ದೇಶ ವಿವರಿಸಿದೆ. ಆ ಎಂ.ಎಲ್.ಎ ಸಂತೋಷದಿಂದ ಸೋಫಾದಲ್ಲಿ ನಮ್ಮ ಪಕ್ಕ ಕುಸಿದು ಕೂತರು.

ನೈಪಾಲರು ನನಗೆ ಸೂಚಿಸಿದಂತೆ, ಆ ಶಾಸಕರನ್ನು ಅವರು ಬೆಳಗಾಂ ಜಿಲ್ಲೆಯಿಂದ ಬಂದಿದ್ದರಿಂದ ಆ ಜಿಲ್ಲೆಯ ವೈಶಿಷ್ಟ್ಯವನ್ನು ಕೇಳಿದೆ. ಅವರು ಒಮ್ಮೆ ಕಿಟಕಿಯಾಚೆ ದೃಷ್ಟಿಸುತ್ತ 'ಕೊಲೆ ಮಾಡುವುದು ನಮ್ಮೂರಿನ ವೈಶಿಷ್ಟ್ಯ' ಎಂದರು. ನೈಪಾಲರು ಅವನೇನಂದ ಎಂದು ವಿಚಾರಿಸಿದರು. ನಾನು ಇಂಗ್ಲೀಷಿನಲ್ಲಿ ತಿಳಿಸಿದೆ. 'ವೈ?' ಎಂದರು. ನೈಪಾಲ್ 'ಏಕೆ' ಎಂದು ನಾನು ಆ ಶಾಸಕರನ್ನು ವಿಚಾರಿಸಿದೆ. ಅವರು 'ಹೆಣ್ಣು, ನೀರು ಜಮೀನಿನ ಬಗ್ಗೆ ಕೊಲೆ ಆಗುವುದು ನಮ್ಮಲ್ಲಿ ಸಾಮಾನ್ಯ' ಎಂದರು. ನಾನು ನೈಪಾಲಿಗೆ ಅಕ್ಷರಶಃ ತರ್ಜುಮೆ ಮಾಡಿದೆ. ನೈಪಾಲರು ಆ ಶಾಸಕರನ್ನು ಅಪಾದ ಪುಸ್ತಕ ದಿಟ್ಟಿಸಿ ನಂತರ ಚೇತರಿಸಿಕೊಂಡು ಕೆಲವು ಪ್ರಶ್ನೆಗಳನ್ನು ಕೇಳಿದರು. ನಾನು ನೈಪಾಲಿಗೆ ಜಾಕ್‌ಪಾಟ್ ಹೊಡೆದಷ್ಟು ವಿಚಾರ ಸಿಕ್ಕಿರಬೇಕೆಂದು ತಿಳಿದೆ.

ಮುಂದೆ ಪುಸ್ತಕ ಪ್ರಕಟವಾದಾಗ ಒಂದು ಅಧ್ಯಾಯ ಕರ್ನಾಟಕದ ಬಗ್ಗೆ ಅದು ಪ್ರಕಾಶರ ಬಗ್ಗೆ ಇತ್ತು. ಆ ಅಧ್ಯಾಯದ ಮಿಕ್ಕ ಭಾಗ ನನ್ನ ಸಹದ್ಯೋಗಿ ಒಬ್ಬ ವಿದ್ಯಾವಂತ ಯುವಕರೂ ಕೂಡ ಆತಂಕದಲ್ಲಿ ಏಕೆ ಅಯ್ಯಪ್ಪನ ಭಕ್ತರಾಗುತ್ತಾರೆ. ವರ್ಷಕ್ಕೊಮ್ಮೆ ಮಾಂಸಬಿಟ್ಟು, ಮಾಲೆ ಧರಿಸಿ, ನೆಲದ ಮೇಲೆ ಮಲಗಿ ಬ್ರಹ್ಮಚರ್ಯ ಪಾಲಿಸುತ್ತಾರೆ. ಶಬರಿ ಬೆಟ್ಟದ ಪ್ರಯಾಸದ ಪ್ರವಾಸ, ಉರಿಗೆ ಬಂದ ಕೂಡಲೇ ಹೇಗೆ ಸಮಸ್ಯೆ ಪರಿಹಾರವಾಗಿ ಆತಂಕ ನಿರ್ಮೂಲವಾಗುತ್ತೆ ಮತ್ತು ಮುಂದಿನ ವರ್ಷದ ತನಕ ಮಾಂಸ, ಹಾದರ ಎಗ್ಗಿಲ್ಲದೆ ನಡೆಯುವುದರ ಬಗ್ಗೆ ಇತ್ತು. ನಾನು ನನ್ನ ಸಹೊದ್ಯೋಗಿಯ ಹೆಸರನ್ನು ಹುಡುಕಿದೆ. 23 ಬಾರಿ ಪ್ರಕಟವಾಗಿತ್ತು. ನನ್ನ ಪರ ದಾಟದ ಬಗ್ಗೆ ಒಮ್ಮೆಯೂ ಇರಲಿಲ್ಲ. ನನಗೆ ಸಿಗಬೇಕಾದ ಮನ್ನಣೆ,ಕ್ರೆಡಿಟ್ ಸಾಲದ ಕ್ರೆಡಿಟ್ಟು ಸೇರಿ - ಸಿಗುವುದಿಲ್ಲವೆಂದು ನನ್ನ ಜಾತಕ ನೋಡಿದ ಒಬ್ಬರು ಹೇಳಿದ್ದರಿಂದ ನಾನು ಸುಮ್ಮನಾದೆ.

ಈ ಮಧ್ಯೆ ನಾನು ಅವರೊಂದಿಗೆ ಕಳೆದ ದಿನಗಳ ಬಗ್ಗೆ ಪತ್ರಿಕೆಯಲ್ಲಿ ಬರೆಯಬಹುದೇ ಎಂದು ಅನುಮತಿ ಕೇಳಿದೆ. ನನ್ನ ಬಾಲಿಶ ಪ್ರಶ್ನೆ ಬಗ್ಗೆ ತುಸು ಹೊತ್ತು ಯೋಚಿಸಿ ನನ್ನ ಬಗ್ಗೆ ಧೈರ್ಯಸಾಲದೆಂಬಂತೆ, 'I would rather not' ಎಂದರು. ಎರಡುವಾರದ ನಂತರ ಇಡೀ ದೇಶದಲ್ಲಿ ಪ್ರಕಟವಾಗುವ ಎಕ್ಸ್‌ಪ್ರೆಸ್ಸಿನ ವಾರದ ಪುರವಣಿಯಲ್ಲಿ ಮದ್ರಾಸ್ಸಿನಲ್ಲಿ ಇವರೊಂದಿಗೆ ಓಡಾಡಿದ ಸುರೇಶ್ ಮೆನನ್ ಬರೆದ ಮದ್ರಾಸ್ ಅನುಭವದ ಸೊಗಸಾದ ಲೇಖನ ಇಡೀ ಪುಟ ಪ್ರಕಟವಾಗಿತ್ತು. ಸುರೇಶ್ ಮೆನನ್ ನೈಪಾಲರನ್ನು ಹೊಗಳಿ ಬರೆದಿದ್ದ. ಹಾಗೂ ಸುರೇಶ್ ನಮ್ಮ ದೇಶದ ಕೆಲವೇ ಉತ್ತಮ ಪತ್ರಕರ್ತ ಬರಹಗಾರರಲ್ಲಿ ಒಬ್ಬ. ಅವನೂ ನನ್ನಂತೆ ನೈಪಾಲರನ್ನು ಅವರ ಭಾರತದ ಪ್ರವಾಸದ ಬಗ್ಗೆ ಬರೆಯಲು ಅನುಮತಿ ಕೇಳಿರಬೇಕು. ಅಥವಾ ಸುಮ್ಮನೆ ತನ್ನ ಅಪರೂಪದ ಅನುಭವದ ಬಗ್ಗೆ ಅನುಮತಿ ನಿರಾಕರಿಸಿದ್ದರೂ ಬರೆದಿರಬಹುದು. ನೈಪಾಲನಿಂದ ನಾನು ಕಲಿಯುವುದು ಮಾತ್ರ ನಿರಂತರವಾಗಿ ಮುಂದುವರಿಯುತ್ತಿತ್ತು!!

■ ರಾಜು

---

**ಲಿಫ್ಟ್ ತಯಾರಿಕೆಗೆ ಹೆಸರು ಮಾಡಿದ ಕಂಪೆನಿ ಓಟಿಸ್. ಅವರ ಸರಕು ಸಾಗಾಣಿಕೆ ಲಾರಿಯ ಬೆನ್ನಿನ ಮೇಲಿರುವ ಬರಹ ಏನು ಗೊತ್ತೆ?**
**'ಅಪರಿಚಿತರಿಂದ ಲಿಫ್ಟ್ ಪಡೆಯಬೇಡಿ'**

# ಹೊರಟುದ್ದ ನೊಲಡಾಸ.....



ದೀಪಾವಳಿ ಕಥಾಸ್ಪರ್ಧೆಯಲ್ಲಿ
ಮೆಚ್ಚುಗೆ ಪಡೆದ ಕತೆ

■ ಪ್ರಹ್ಲಾದ ಅಗಸನಕಟ್ಟೆ

ರಾಮಾಂಜನೇಯ ಬಸ್ಸಿನಿಂದ ಧೂಳು ತುಂಬಿದ ರಸ್ತೆಗಿಳಿದಾಗ ನೆತ್ತಿಯ ಮೇಲೆ ಸೂರ್ಯ ಕೆಂಡಾಮಂಡಲವಾಗಿ ಇಡೀ ಭೂಮಂಡಲ ನಿಟ್ಟುಸಿರ ತಿದಿಯನ್ನೊತ್ತುತ್ತಿತ್ತು. ಇಂಥ ಉರಿವ ಊರಿಗೆ ಅದ್ಯಾವ ಮಹಾನುಭಾವ ರಾಮದುರ್ಗ ಅಂತ ಹೆಸರಿಟ್ಟನೋ ಸುತ್ತಣ ಕರಿಯಾನೆಯಾಕಾರದ ದೊಡ್ಡ ದೊಡ್ಡ ಬಂಡೆಗಳು-ಗುಡ್ಡಗಳು-ಹಾಳುಬಿದ್ದ ಕೋಟೆ ಕೊತ್ತಳಗಳು-ಬುರುಜುಗಳು ರಣಗುಡುವ ಬಿಸಿಲಿಗೆ ಮತ್ತೂ ಉಗ್ರ, ಕಪ್ಪಾಗಿ ಈಗ ಸಿಡಿದು ಈ ನಗರವನ್ನ ಚಪ್ಪನ್ನ ಚೂರು ಮಾಡುವಂಗೆ ಥಳಥಳಿಸುತ್ತಿದ್ದವು.

ಅಸ್ವಸ್ಥಗೊಂಡ ಮನಸ್ಸು ಉರಿವ ಬಿಸಿಲಿಗೆ, ಧೂಳು ಮಿಶ್ರಿತ ಕಡುಬಿಸಿಲ ಗಾಳಿಗೆ ಒಡೆದ ಹಾಲಾಯ್ತು. ದುರ್ಗಕ್ಕೆ ಹೊರಡುವ ಮುನ್ನ ಹೆಂಡತಿಯ ಎದುರು ವೀರಾವೇಶದಿಂದ ಕದನಕ್ಕಿಳಿದು 'ಎಲ್ಲಾದರೂ ನಾಕು ದಿನ ತಣ್ಣಗಿದ್ದು ಬರ್ತೇನೆ... ನೀನೂ ತಣ್ಣಗಿರು' ಅಂದು ಬಂದವನಿಗೆ ಆಹಾ ಎಂಥ ತಂಪಾದ ಜಾಗಕ್ಕೆ ಬಿಜಂಗೈಯ್ದೆನಲ್ಲಾ ಅನ್ನಿಸಿ ಮತ್ತೂ ಧಾರೆಧಾರೆಯಾಗಿ ಗಗನದಿಂದ ಭೋರ್ಗರೆವ ಬಿಸಿಲ ಝರಿ ನೋಡಿ' ಉಶ್ಯಪ್ಪಾ' ಅಂದ.

ಸಂತೆ ಹೊಂಡದ ಸುತ್ತಾ ಗಜಬಿಜಿಯ ಸಂತೆ. ಸಗಣೆಯಲ್ಲಿ ಪಿಸಿಗುಡುವ ಹುಳುಗಳಂತೆ ಜನ. ಆಹಾ ಥಂಡ ಅಂಥ ಕೆಂಪು ನೀರ ಮಾರುವವರು, ಥಂಡ ತಗಂಡು ಏನ ಮಾಡ್ಲಿ ಅಂಥ ಡಬ್ಬಿ ಅಂಗಡಿಗಳಲ್ಲಿ ಬಿಸಿ ವಡೆ ಮಂಡಕ್ಕಿ ಮಿಕ್ಸ್ ಮಾಡಿಕೊಂಡು ಮುಕ್ಕುತ್ತಾ ಕೂತಂಥವರು, ಯಾವುದೋ ಬಸ್ಸು ಎತ್ತಲಿಂದಲೋ ಧೂಳೆಬ್ಬಿಸುತ್ತಾ ಬರಲು ಅಹ, ಬಂತಲೇ ಅಂಥ ಪುಟ್ಟಿ, ಚೀಲ, ಗಂಟುಗಳ ಅಮರಿಕೊಂಡು ದುಡು ದುಡು ಹತ್ತಿ.... ಆಯ್ಯೋ ಇದಲ್ಲ ಕಣಲೇ ಬಾ ಅಂತ ಬುದು ಬುದು ಕೆಳಗಿಳಿಯುವವರು, ನಿಂತಲ್ಲಿ ಅಮ್ಮ ವಸಿ ಭಿಕ್ಷೆ ಮಾಡಮ್ಮಾ ಅಂಥ ಮೈ ಮೇಲೆ ಎರಗಿ ಜೇಬಿಗೆ ಕೈ ಹಾಕುವಂಥ ಬೇಡುವವರು.....

ಗೆಳೆಯ ಮೋಹನನ ಮನೆ ಇಲ್ಲಿಂದ ಎರಡು ಕಿಲೋಮಿಟರ್ ಆಚೆ... ಕೆಳಗೋಡೆಯಲ್ಲಿ... ಕಾದ ಡಾಂಬರಿನ ಹಾದಿ ಬಿಸಿಲಿಗೆ ಎಣ್ಣೆಯಂತೆ ಜಗಿಜಗಿ... ಮಿಂಚಿ... ಆರಿದ ಗಂಟಲಿಗೆ, ಒಣಗಿದ ತುಟಿಗಳಿಗೆ ಒಂದು ಕಡಕ್ ಟೀ ಒಂದು ಸಿಗರೇಟಿನ ಒಂದು ದಮ್ ಹೊಗೆ ಸುರಿಯುವುದೇ ಲೇಸು ಅಂತ ಅವ ಅರಳಿಮರದ ಕೆಳಗಿನ ಹಳೆಯ ಹೋಟೆಲಿಗೆ ನುಗ್ಗಿದ. ಅಲ್ಲಿ ಗಿರಾಕಿಗಳಿಗಿಂತ ನೊಣಗಳೇ ಹೆಚ್ಚು.

'ಎಂಥವನಿಗೆ ನನ್ನ ಕಟ್ಟಿ ಹಾಕಿದೆಯಣ್ಣಾ' ಭಗ್ಗನೆ ಸಿಗರೇಟಿನ ಹೊಗೆಯೊಡನೆ ಅಜ್ಞಾತ ಸ್ಮೃತಿ ಹೊತ್ತಿ ತಂಗಿಯ ಮಾತುಗಳು ಶ್ವಾಸನಾಳದೊಳಕ್ಕೆ ಇಳಿದವು. ದಾವಣಗೆರೆ- ದುರ್ಗದ ಮಧ್ಯದ ಊರು ತಂಗಿಯದು. ಆ ಊರಲ್ಲಿ ಮನೆಯೆಂದು ಕರೆವ ಜನತಾ ಸೂರೊಂದು. ಹಿತ್ತಲಲಿ-ಮಧ್ಯಾಹ್ನದ ಅಡುಗೆಗೆಂದು ಲಂಟಾನು ಕಟ್ಟಿಗೆಗಳನ್ನು ಕುಡಗೋಲಿಂದ ಕತ್ತರಿಸುತ್ತಿದ್ದ ಆಕೆ ಅವನನ್ನು ಕಂಡವಳೆ ನಗುವೋ? ಹಾಗೆನ್ನುವುದನ್ನು ಮುಖಕ್ಕೆ ತಂದುಕೊಂಡು 'ಈಗ ಬಂದೇನಣ್ಣಾ... ಎಲ್ಲಾ ಪಾಡದರ್ರಾ' ಅಂತ ಮಾಸಲು ಸೀರೆ - ಬೆನ್ನ ಹಿಂದೆ ಹಿಂಜಿದ ಜಾಕೆಟನ್ನು ಸರಿ ಮಾಡಿ ಮುಸಗ ಹೊದ್ದುಕೊಳ್ಳುತ್ತಾ ತಾನು ಪಾಡಿಲ್ಲ ಎಂಬುದನ್ನು ತೋರಿದಳು.

ಯಾವ ಓಣಿಯಲ್ಲಿದ್ದವೋ..... ಮಾಮಾ.... ಮಾಮಾ ಅನ್ನುತ್ತಾ ಆಕೆಯ ಎರಡು ಹುಡುಗರು ಇಡೀ ಊರಿನ ಹೊಲಸನ್ನೇ ತಮ್ಮ ಮೈಮೇಲೆ ಹೊದ್ದವರಂತೆ ಓಡಿ ಬಂದು ಅವನು ತಂದಿದ್ದ ಬ್ರೆಡ್ಡು ಬಿಸ್ಕತ್‌ಗಳಿಗೆ ಮುಗಿಬಿದ್ದು 'ಮತ್ತೇನ ತಂದಿ ಮಾಮಾ' ಅನ್ನುತ್ತಾ ಬ್ರೆಡ್ಡು ಬಿಸ್ಕತ್‌ಗಳನ್ನು ಚೆಲ್ಲಾಡಿದರು.

ಹೊರಗೆ ನಿಡಿದಾದ ಭರಗುಟ್ಟುವ ಹೈವೆ. ಸಾಲು ಸಾಲು ಹುಣಸೆ, ಬೇವು, ಮಾವು, ಜಾಲಿ ಮರಗಳು. ಯಾವುದೋ ಸ್ಪರ್ಧೆಗೆ ಓಡುವಂತೆ ಭರಗುಟ್ಟಿ ಸಾಗುವ ಲಾರಿಗಳು. ಅವುಗಳನ್ನೇ ನೋಡುತ್ತಾ 'ಅವ್ರು ಇಲ್ವೇನಮ್ಮ ಊರಲ್ಲಿ' ಅಂದ. ಎಂದು ತಾನೇ ಇದ್ದರೂ ಎಂಬಂತೆ.

'ಇಲ್ಲಣ್ಣಾ ದಾವಣಗೆರೆಗೆ ಹೋಗ್ಯಾರೇ....' ಮುಂದೇನು ಮಾತು. ನಿಂತು ಹೋಯಿತು. ಎಲ್ಲಾ ಕಿತ್ತಾಡಿ ರಾಣರಂಪ ಮಾಡುತ್ತಿದ್ದ ಹುಡುಗರ ಬೆನ್ನಿಗೆ ನಾಕು ತದಕಿ' ಎಂದಾದ್ರೂ ತಿಂದಿದ್ದಿರೋ ಇಲ್ವೋ ಬರಗೆಟ್ಟವಾ' ಅಂತ ಆಕೆ ಹುಡುಗರನ್ನ ಬಾಯಿಗೆ ಬಂದಂಗೆ ಬೈಯುತ್ತಾ ಅವುಗಳ ಕೈಯೊಳಗಿಂದ ಬ್ರೆಡ್ಡು ಬಿಸ್ಕತ್ ಕಸಿದುಕೊಂಡು ಮಾಡಿನ ಮೇಲಿಟ್ಟು 'ಹೊಕ್ಕಿರೋ ಇಲ್ಲೋ' ಅಂತ ಕೈಯೆತ್ತಿದಳು. ಅವು 'ಬಡಿಬೇಡವ್ವಾ ಹೊಕ್ಕಿವಿ' ಅಂತ ಅರಚುತ್ತಾ ಹೊರಕ್ಕೆ ನಾಗ್ಗಾಲಿಲಿ ಓಡಿದವು.

ಮೂಕನಂತೆ ಅದೆಲ್ಲಾ ನೋಡುತ್ತಾ ಏನೂ ಅನ್ನಲಾರದೆ ಆಡಲಾರದೆ 'ಈಗ ಹೆಂಗಿದರವ್ವಾ ಅವ್ರು' ಅಂದ. ಆಕೆಯ ಮುಖ ಮ್ಲಾನವಾಗಿ ಬಿಕ್ಕಳಿಕೆಗಳು ಗಂಟಲಿಗೆ ಬಂದಂತೆ' ನಂದಿಂತ ನಾಯಿ ಬಾಳ ತಣ್ಣಾ, ಅನ್ನಂಗಿಲ್ಲ ಆಡಂಗಿಲ್ಲ. ದಿನಾ ಸಂಜೆ ಮುಂದ ಕುಡಿದು ಬರ್ತಾರ. ಮನೆಯಾಗ ಏನೈತಿ ಏನಿಲ್ಲ ಅನ್ನಂಗಿಲ್ಲ. ಸುತ್ತ ಲಿಂಗಾಯ್ತಿ ಮಂದಿ ನಿನ ಗಂಡ ಕುಡುಕ ಅಂತ ನಗಾಡ್ತರೆ. ದುಡಿತರೆ ತಾವು ಸುಖ ಪಡ್ತಾರೆ ಹೆಂಡ್ರು ಅನ್ನಂಗಿಲ್ಲ, ಮಕ್ಕಳು ಅನ್ನಂಗಿಲ್ಲ. ಮುಂದೆ ಮಾತಾಡಲಾರದೆ ಆಕೆ ಸೀರೆಯ ಸೆರಗಿನಿಂದ ಕಣ್ಣೀರ ಒರೆಸಿಕೊಳ್ಳುತ್ತಾ 'ನಿಮ್ಮ ಮರ್ಯಾದೆ ಹೊಗ್ಬಾರ್ದು ಅಂತ ಇವ್ರ ಕೂಡ ಬಾಳ್ವೆ ಮಾಡಿಕೊಂಡಿದ್ದೀನೀ ಅಣ್ಣ... ಸಪ್ಪೈಯರ್ ಬಿಲ್ ಮುಂದಿಕ್ಕಿ ಹೋಗಿ ಎಷ್ಟ ಹೊತ್ತು ಸರಿದು ಹೋಗಿತ್ತೋ ಹೊರಗೆ ಮಾತ್ರ ಹೊತ್ತು ಗೊತ್ತಿಲ್ಲದೆ ಸುರಿವ ಬಿಸಿಲ ಇನ್ನೂ ಸುರಿಯುತ್ತಲೇ ಇತ್ತು.



ಕೆಳಗೋಡೆಯ ಮೋಹನನ ಮನೆ ಮುಂದೆ ನಿಂತು ಆರ್.ಮೋಹನ ಅಧೀಕ್ಷಕ, ಖಜಾನೆ ಇಲಾಖೆ ಎಂಬ ಫಲಕ ಓದುತ್ತಾ ಕರಗಂಟೆ ಒತ್ತಿದ. ಬೀದಿಯ ಬಿಸಿಲ ಝಳ ಕಾಲಲಿ ಭುಸುಗುಟ್ಟುತ್ತಿತ್ತು. ಎಷ್ಟೋ ಹೊತ್ತಾದರೂ ಕದ ತೆಗೆಯುವ ಸೂಚನೆ ಕಾಣದೆ ಮತ್ತೊಮ್ಮೆ ಬೆಲ್ ಬಾರಿಸಿದ. ಈ ಬಾರಿ ಕದ ತೆಗೆದ ಮೋಹನನೆ. ಕಣ್ಣುಜ್ಜಿಕೊಂಡು ಅವನನ್ನ ನೋಡಿದವ 'ಯಾವಾಗ ಬಂದೆಯೋ' ಅಂದ. ಹಾಗಂದವನ ದನಿಯಲ್ಲಿ ಈಗ ಯಾಕೆ ಬಂದೆಯೋ ಎಂಬ ಅಂತರ್ಯದ ಅರ್ಥ ಗುರುತಿಸಿ ಗಲಿಬಿಲಿಗೊಂಡ ಅವ ಮೋಹನನ ಕಣ್ಣುಗಳನ್ನು ನೋಡಿದ. ಅವೇನು ನಿದ್ದೆಯಿಂದ ಕಂಗೆಟ್ಟಿದ್ದವೋ. ಸಿಟ್ಟನಿಂದ ಕೆಂಪಾಗಿದ್ದವೋ ರಾತ್ರಿಯ ಕುಡಿತದಿಂದ ಹಂಗಾಗಿದ್ದವೋ. ಒಟ್ಟನಲ್ಲಿ ದುಮು ದುಮು ಉರಿಯುತ್ತಿದ್ದವು. ಇಳಿ ಬಿದ್ದ ಲಂಡಬಂಡ ಪಂಚೆಯನ್ನು ಒಳಗಿನ ಚೆಡ್ಡಿ ಕಾಣುವಂತೆ ಮೇಲಕೆತ್ತಿ ಅದನ್ನು ನಡಕ್ಕೆ ಸುತ್ತಿಕೊಳ್ಳುತ್ತಾ 'ಏನೋ ಕೆಂಡದಂತ ಹೊತ್ತಿನ್ಯಾಗ' ಅಂದ.

ಮೂಲೆಯ ಮಂಚದ ಮೇಲೆ ಸೂಟ್‌ಕೇಸ್ ಇಕ್ಕಿ ಶೂ ಕಳಚುತ್ತಾ ಅವ ಒಮ್ಮೆ ಉಶ್ಯ ಅಂದು 'ಏನೋ ಬೇಜಾರು... ನಿಮ್ಮನ್ನೆಲ್ಲಾ ನೋಡಿಕೊಂಡು... ಹಗುರಾಗಿ ಹೋಗಾಣಂತ ಬಂದೆ' ಅಂತ ನಕ್ಕ. ಸಪ್ಪೆ ಮೋರೆಯ ಮೋಹನ ನಗದೆ ಒಳ ಹೋದ.

ಮೂರು ಕೋಣೆಗಳುಳ್ಳ ಸಣ್ಣ ಬೆಂಕಿ ಪಟ್ಟಣದಂತಹ ಆ ಮನೆಯಲ್ಲಿನ ಬಿಸಿಯನ್ನೋಡಿಸಲು ಒಂದು ಕ್ರಾಂಪ್ಟನ್ ಫ್ಯಾನು ಇನ್ನಿಲ್ಲದ ಪ್ರಯಾಸದಿಂದ ರಂವ್ ರಂವ್ ಎಂದು ಶಬ್ದ ಮಾಡುತ್ತಾ ತಿರುಗುತ್ತಿತ್ತು. ಎದುರಿನ ಮಂಚ ಕುರ್ಚಿ ಟೀಪಾಯಿ ಟೇಬಲ್‌ಗಳ ಮೇಲೆಲ್ಲಾ ಹಳದಿ ಕಲರಿನ ಧೂಳು ಮೂಲೆಯಲ್ಲಿ ಸಿಕ್ಕಾಪಟ್ಟೆ ಎಸೆದಿದ್ದ ಚಪ್ಪಲಿ ಬೂಟು, ಟೇಬಲ್ ಮೇಲೆ ಕಸದಂತೆ ಎಸೆದಿದ್ದ ದಿನಪತ್ರಿಕೆ, ವಾರಪತ್ರಿಕೆ ಮನೆ ತುಂಬಾ ಏನೇನೋ ಇದ್ದು ಇವುಗಳನ್ನೆಲ್ಲಾ ಸಂಯೋಜಿಸುವ ಸೂತ್ರವೊಂದು ಅದೃಶ್ಯವಾಗಿ ಬಿಟ್ಟಿದೆಯೇನೋ ಅನ್ನಿಸುವವರಿಗೆ ಮನೆ ಭಣ ಭಣ ಗುಡುತ್ತಿದೆಯೆನಿಸಿತು.

ಒಳಗಿಂದ ಟವಲ್ ಹಿಡಿದು ಬಂದ ಮೋಹನ 'ಬಾರೋ ಮುಖ ತೊಳ್ಕ' ಅಂದ ಬಚ್ಚಲ ಕಡೆ ನಡೆದ. ಮೋಹನ ಕೊಟ್ಟ ಹಸಿರ ಚಾಕಳಿಯ ಟವಲ್‌ನ್ನು ಹೆಗಲಿಗೆ ಹಾಕಿಕೊಳ್ಳುತ್ತಾ ಅವ ಮೊದಲನೆ ಕೋಣೆ ದಾಟಿ ಎರಡನೆಯ ಬೆಡ್‌ರೂಂನ್ನು ದಾಟುತ್ತಿರುವಾಗ ಮೋಹನ ಹೆಂಡತಿ ಕಾಟಿನ ಮೇಲೆ ಒಂದು ಕಡೆ ಹೊಳ್ಳಿ ಮಲಗಿದ್ದವಳು ನಿಧಾನಕ್ಕೆ ಕೈಯನ್ನು ಮಂಚಕ್ಕೆ ಊರಿ, ತಲೆಯ ಸೆರಗನ್ನು ಸರಿಪಡಿಸಿಕೊಂಡು, ಪಕ್ಕದಲ್ಲಿ ಮಲಗಿದ್ದ ಕೂಸಿನ ಮೈ ಮೇಲೆ ಸಣ್ಣ ಬಿಳಿ ಟವಲ್‌ನ್ನು ಹೊದಿಸಿ 'ಈಗ ಬಂದ್ರ ಸಾರ್' ಅಂತ ಸಣ್ಣಗೆ ಮುಲುಕಿದಳು. ಕತ್ತಲಿಡಿದ ಆ ಕಪ್ಪಾದ ಕೋಣೆಯಲ್ಲಿ ಯಾವುದೂ ನಿಚ್ಚಳವಾಗಿ ಕಾಣಲಿಲ್ಲ. ನೆರಳೊಂದು ಎದ್ದು ಕೂತು ಸರಿದಾಡಿ ಮಾತಾಡಿದಂತಾಯ್ತು. ಮೋಹನ ಮತ್ತೊಮ್ಮೆ ತಂದೆ ಆದದ್ದೇ ಅವನಿಗೆ ಆಶ್ಚರ್ಯ ತಂದಿತು. ಬಚ್ಚಲು ಮನೆಯಲ್ಲಿ ಎದೆಯ ಉಗಿಯನ್ನೆಲ್ಲಾ ಹೊರ ಹಾಕುವನಂತೆ ಮುಖ, ಕೊರಳು, ಕೈ ಕಾಲುಗಳಿಗೆ ಭರ್ಜರಿ ನೀರು ಸುರುವಿಕೊಂಡು 'ಅಯ್ಯಪ್ಪ ಎಂಥ ಉರಿ' ಅಂದ್ಕೋತ ಕೈ ಕಾಲು ಒರಸಿಕೊಳ್ಳುತ್ತಾ ಹಾಲ್‌ಗೆ ಬಂದವ ಮೋಹನನನ್ನು ಛೇಡಿಸುವ ದನಿಯಲ್ಲಿ 'ಏನಯ್ಯಾ-ಅಪ್ಪಾ ಆದ ಸಿಹಿ ಸುದ್ದಿನಾ ತಿಳಿಸಲೇ ಇಲ್ಲ' ಅಂದ. ಮೋಹನ ಅದನ್ನ ಹಾಸ್ಯದ ಮಾತೆಂಬುದನ್ನ ಒಟ್ಟಾರೆ ಒಪ್ಪದವನಂತೆ 'ಅಪ್ಪಾ ಆಗೋದು ಏನು ಮಹಾ ಸಂತೋಷವಯ್ಯ ಈ ದರಿದ್ರ ದೇಶದಲ್ಲಿ, ಅದೇ ಸಂತೋಷದ ವಿಷಯವಾಗಿದ್ರೆ ಈ ವರ್ಲ್ಡ್‌ನಲ್ಲಿ ನಮ್ಮ ದೇಶದಷ್ಟು ಸುಖಿ ದೇಶ ಮತ್ತಾವುದೂ ಇರುತ್ತಿರಲಿಲ್ಲ ಬಿಡಯ್ಯಾ' ಅಂದ.

ಒಳಗಿಂದ ನಿದ್ದೆಯಿಂದ ಎಚ್ಚತ್ತ ಕೂಸಿನ ದನಿಯೂ ಅದನ್ನು ಸಮಾಧಾನಿಸಲು ಮೋಹನನ ಹೆಂಡತಿಯ ಪ್ರಯಾಸದ ದನಿಯೂ ಒಟ್ಟಿಗೆ ತೇಲಿ ಬಂದು, ಮೋಹನ ಒಮ್ಮಿಗೆ ಇದೆಲ್ಲದರಿಂದ ಕಿರಿ ಕಿರಿಗೊಂಡವನಂತೆ ಹೆಂಡತಿಗೆ 'ಚಹಾ-ಗಿಹಾ ಏನೂ ಬ್ಯಾಡ ಹೊರಗೆ ಕುಡಿತಿವಿ' ಅಂತ ಕೂಗುವವನ ರೀತಿಯಲ್ಲಿ ಒದರಿದ. ಅವನ ಇನ್ನೆರಡು ಮಕ್ಕಳು ಕಾಣಿಸದೆ ಒಮ್ಮೆಗೆ ಮೂರು ಮಕ್ಕಳನ್ನು ಜೋಪಾನ ಮಾಡುವ ಕಷ್ಟ ನೆನಪಾಗಿ ಅವ 'ಬಾಣಂತನ ಮಾಡೋಕೆ ಯಾರು ಇಲ್ವೇನಯ್ಯಾ' ಅಂದ.

'ಯಾರು ಬರ್ತಾರಪ್ಪ.... ಎಲ್ಲ ನಮ್ಮ ಗ್ರಹಚಾರ... ಅನುಭವಿಸಬೇಕಲ್ಲ... ಹೆರಿಗೆಯಾಗಿ ಎರಡು ತಿಂಗಳಂತು ಈಕೆ ಮನೆಯವರು ಹಂಗ ಬಂದು-ಹೆಂಗಿದ್ದಿಯವ್ವಾ' ಅಂದು ಹಂಗೆ ಹೋದ್ರು... ಇನ್ನ ನಮ್ಮ ಮನೆಯವ್ರನ್ನಾ ಕಂಡರೆ ಈಕೆಗೆ ಒಂಚೂರ ಆಗೊಲ್ಲ....'

ಮೋಹನ ತುರ್ತಾಗಿ ಇಲ್ಲಿಂದ ಪಾರಾಗ ಬೇಕೆನ್ನುವವನ ರೀತಿಯಲ್ಲಿ ಹ್ಯಾಂಗರನಿಂದ ಪ್ಯಾಂಟನ್ನು ಕಾಲಿಗೆ ಏರಿಸಿಕೊಂಡು ಅದರೊಳಕ್ಕೆ ದೊಗಳೆ ಅಂಗಿಯನ್ನು ತುರುಕುತ್ತಾ ಮಾತು ಮುಂದುವರಿಸಿದ 'ನಂಗೆ ಇನ್ನೊಂದು ಮಗುವೇ ಬೇಡಾಗಿತ್ತು ಮಹರಾಯ, ಮೊದ್ಲೆ ನಿನ್ನ ಆರೋಗ್ಯ ಸರಿಯಿಲ್ಲ, ಬೇಡ ಕಣೆ ಅಂತ ಗಿಳಿಗೆ ಹೇಳ್ದಂಗೆ ಹೇಳ್ದೆ. ಅಬಾರ್ಷನ್ ಮಾಡ್ಸೋಣ, ಮೂರು ಮಕ್ಕಳನ್ನ ಈ ಕಾಲದಲ್ಲಿ ಸಾಕೋದು ಕಷ್ಟ ಕಣೆ ಅಂದೆ. ಕೇಳ್ಲಿಲ್ಲ.'

ಅವನು ಇನ್ನು ಏನೇನು ಹೇಳುತ್ತಿದ್ದನೋ ದಿಢೀರನೆ ಅವನ ಹೆಂಡತಿ ಒಳಗಿಂದ ದುಡುದುಡು ಬಂದವಳು 'ನೋಡ್ರಿ ಸಾರ್ ನೋಡ್ರಿ ಕೈ ಹಿಡಿದ ಹೆಂಡ್ತಿ ಬಗ್ಗೆ ಎಷ್ಟು ಸದರ ಮಾತಾಡ್ತವ್ರೆ. ನನ್ನೇನು ಮನೆಯಾಗೆ ಪಾತ್ರೆ ತಿಕ್ಕೋ ಪರದೇಶಿಂತಾ ತಿಳಕಂಬಿಟ್ಟವ್ರೆ. ಬಾಯಿಗೆ ಬಂದಂಗೆ ಮಾತಾಡೋಕೆ ಬಂದ ಬಂದವ್ರತ್ರ ನನ್ನ ಮಾನ ಕಳಿಯಾಕೆ.' ಬಿಳಿಚಿಕೊಂಡ ಆಕೆಯ ಮುಖ ಸಿಟ್ಟು ಅವಮಾನ ದುಃಖದಿಂದ ಕಂಗೆಟ್ಟು ವಿಕಾರ ರೂಪಕ್ಕೆ ತಿರುಗಿದಂತೆ ತೋರಿ ಅವ ಏನು ಮಾಡಬೇಕೆಂಬುದು ಹೊಳೆಯದೆ' ಬಿಡ್ರಿ ಬಿಡ್ರಿ ಇಂಥ ಸಣ್ಣ ವಿಷಯಕ್ಕೆಲ್ಲ....' ಅನ್ನುತ್ತಿದ್ದಂತೆ ಮೋಹನ ದಿಢೀರನೇ ಹೆಂಡ್ತಿ ಹಿಂದೆ ಪ್ರತ್ಯಕ್ಷಳಾಗಿ

### ಸಿಹಿ-ಪ್ರೀತಿ



ನಿನ್ನ ಕಡಲಷ್ಟು  
ಪ್ರೀತಿಯ  
ನಾನೊಲ್ಲೆ ನಲ್ಲ  
ಒಂದು ಸಣ್ಣ ಸಿಹಿನೀರ  
ಝರಿಯಂತಹ  
ಪ್ರೀತಿಯೇ ಸಾಕೆನಗೆ!

■ ಕ.ಬ.ವೀರಣ್ಣ ಕಣ್ಣಾಗಲ

ವಾಗ್‌ಯುದ್ಧಕ್ಕೆ ನಿಲ್ಲುತ್ತಾಳೆಂಬುದನ್ನು ನಿರೀಕ್ಷಿಸಲಾರದೆ ಅಪ್ರತಿಭನಾಗಿ 'ಹೋಗು ಹೋಗು ನಾಚಿಕೆಯಿಲ್ಲದವಳೆ...' ಅಂತ ರವ್ವನೆ ಆಕೆಯತ್ತ ನುಗ್ಗಿ ರಟ್ಟೆ ಹಿಡಿದು ಆಕೆಯನ್ನು ತಳ್ಳುತ್ತ ಒಳಕೋಣೆಗೆ ನುಗ್ಗಿದ.

ಇಂಥ ಉರಿ ಉರಿ ಮಧ್ಯಾಹ್ನದ ಉರಿಬಿಸಿಲಿಗೆ ತಣ್ಣಗೆ ಮಲಗಿದ್ದ ಸ್ನೇಹಿತನ ಸಂಸಾರವನ್ನ ಹಿಂಗೆ ದೀಢಿರನೆ ನುಗ್ಗಿ ಕಾದಾಟದ ಕಾಳ್ಗಿಚ್ಚಿಗೆ ತಾನೆ ದೂಡಿಬಿಟ್ಟೆನೆ ಎಂಬ ಹಪಾ ಹಪಿತನದಲ್ಲಿ ಸುಮ್ಮನೆ ಅವ ಕೂತ. ಇವರಿಬ್ಬರ ಮದುವೆಗೆ ತಾನೇ ಓಡಾಡಿದ್ದು, ಅಕ್ಕನ ಮಗಳನ್ನು ಅನಿವಾರ್ಯವಾಗಿ ತಂದೆ ತಾಯಿಗಳ ಒತ್ತಾಯಕ್ಕೆ ಮದುವೆಯಾಗುತ್ತಿದ್ದೇನೆ ದಯಮಾಡಿ ಕೂಡಲೇ ಬಂದು ನನ್ನೊಡನೆ ಹುಡುಗಿಯನ್ನು ನೋಡಲು ಬಾ ಎಂದು ಅವನು ಪತ್ರ ಬರೆದಿದ್ದು... ಎಲ್ಲಾ ನೆನಪಾಯಿತು.

ಇಂಥದ್ದೆ ಒಂದು ರಣರಣ ಮಧ್ಯಾಹ್ನ. ಕುಂಟೆ ಹೊಡೆದ ಹೊಲಗಳಲ್ಲಿ ದೊಡ್ಡ ದೊಡ್ಡ ಮಣ್ಣಿನ ಹೆಂಟೆಗಳನ್ನು ತುಳಿಯುತ್ತಾ ಮೋಹನನ ಅಕ್ಕನ ಮನೆ ತಲುಪಿದಾಗ ಸಂಜೆ. ಅದೊಂದು ಕಗ್ಗಾನು ಕಗ್ಗ ಹಳ್ಳಿ, ಥೇಟು ಹಳ್ಳಿಯ ಹುಡುಗಿಯಂತೆ ತಲೆಗೆ ಭರ್ಜರಿ ಹರಳೆಣ್ಣೆ ಸುರುವಿಕೊಂಡು ಗಟ್ಟದ್ದಾಗಿ ಗೆರೆ ಕೊಯ್ದುಂತೆ ನಡು ಬೈತಲೆ ತಕ್ಕೊಂಡು ಕಣ್ಣಿಗೆ ದಪ್ಪ ಕಾಡಿಗೆಯನ್ನು, ಒರಟೊರಟು ಕೈಗಳ ತುಂಬಾ ಕೆಂಪು ಬಳೆಗಳನ್ನು ಇರುಕಿಕೊಂಡು ಅತ್ತಿತ್ತ ಮೋಹನ ಮದುವೆಯಾಗುವ ಹುಡುಗಿ ಓಡಾಡಿಯೇ ಓಡಾಡುತ್ತಿತ್ತು. ಆ ಮನೆಯವರೋ ಮೋಹನ ಆ ಹುಡುಗಿಯನ್ನು ನೋಡಲಿ ಅಂತ ಮತ್ತೆ ಮತ್ತೆ.... ಎಲ್ಲದಕ್ಕೂ ಆ ಹುಡುಗಿಯನ್ನೆ ದಬ್ಬುತ್ತಿದ್ದರು. ತಿಂಡಿ ಕೊಡಲಿಕ್ಕೆ ನೀರ ಇಡಲಿಕ್ಕೆ ಚಹ ತರಲಿಕ್ಕೆ ಮೋಹನ 'ಹೆಂಗೋ' ಅಂತ ಕಣ್ಸನ್ನೇ ಮಾಡಿದ. 'ಹಿಂಗ' ಅಂತ ಸತ್ಯ ಹೇಳಲಾರದ ಆ ಹುಡುಗಿ ಕೊಟ್ಟ ಕಡು ಚಹಾ ಗಂಟಲಿಗಿಳಿಯದೆ ಕೆಮ್ಮಿ 'ಹೋಗಣ್ಣ' ಅಂದ. ದಾರಿಯುದ್ದ ಇಬ್ಬರು ಮದುವೆ ಕುರಿತು ಏನೇನೋ ಮಾತಾಡಿದರು. ಮೋಹನನ ಅಪ್ಪ... ಹೆಂಗಾದರೂ ಮಾಡಿ ನಿನ್ನ ಗೆಳೆಯನ್ನ ಒಪ್ಪಿಸಪ್ಪ. ಕರುಳ ಕೂಡ್ಸಿದಂಗೆ ಆಗ್ತದೆ.' ಅಂತ ಹಿತ್ತಲಲ್ಲಿ ಕೈ ಹಿಡಿದು ಗೋಗರೆದರು. ಆದರೂ 'ಮೋಹನ.... ಮದ್ವೆ ನಿನ್ನ ಸ್ವಂತ ವಿಷಯ. ಎಲ್ಲಾದ್ರಲ್ಲೂ ತದ್ವಿರುದ್ಧವಾಗಿರೋ ಹುಡುಗಿನ ಕೈ ಹಿಡಿಯಲಿರುವ ನಿನಗೆ ಅಪಾರ ಸೈರಣೆ, ತಾಳ್ಮೆ ಬೇಕು....' ಅಂತ ಹೇಳಿ ಬಂದದ್ದು, ಸ್ವಲ್ಪ ದಿನಗಳಲ್ಲಿಯೇ ಕಾರ್ತಿಕ ಮಾಸದಲ್ಲಿ ಮದುವೆಯಾದದ್ದು, ಅಂದಿನಿಂದ ಸುರುವಾದ ಈ ಗೋಳು, ಕಿರಿ ಹಳ್ಳದಂತೆ ಜಿನುಗುತ್ತಾ ಈಗ ಧಾರಾಕಾರ ಧುಮ್ಮಿಕ್ಕುವ ಜಲಪಾತದಂತೆ. ಕರಳನ್ನು ಒಂದುಗೂಡಿಸುತ್ತೇವೆಂದು ಮದುವೆ ಮಾಡಿದವರೆಲ್ಲ ಈಗ ಇವರುಗಳ ಕರಳು ಉರಿಯುತ್ತಿರುವಾಗ ಎಲ್ಲಿದ್ದಾರೋ....?

'ಹೊಡಿರಿ.... ಹೊಡ್ದು ನನ್ನ ಸಾಯ್ಸಿ ಬಿಡ್ರಿ.... ನಾ ಸತ್ರೆ ಪೀಡೆ ಕಳಿತತೆ'

'ಬಾಯಿ ಮುಚ್ಚೆ ಕತ್ತೆ.... ನಾಚಿಕೆ ಹೇಸಕೆ ಇಲ್ದವಳೆ'

ಒಳಗಿಂದ ಬೈಗುಳ ಪ್ರತಿ ಬೈಗುಳಗಳು ಇನ್ನು ಕೇಳಲಾರೆನಂಬಂತೆ ಅವ ಕೋಣೆಗೆ ನುಗ್ಗಿ

'ಮೋಹನ ಏನು ಮಹಾರಾಯ ಇದೆಲ್ಲ....' ಅಂತ ರಟ್ಟೆಹಿಡಿದು ಜಗ್ಗಿ ಆಕೆಗೆ

'ನೀವು ಸುಮ್ನೆ ಮಕ್ಕಳಮ್ಮ' ಅಂದ. ಇವರ ಗದ್ದಲದಲ್ಲಿ ಕೂಸಿನ ಅಳು ಜೋರಾಯಿತು.



ಮೋಹನ ಸಡಿಲಾದ ಪ್ಯಾಂಟನ್ನು ಮೇಲಕ್ಕೆತ್ತಿ ಕಟ್ಟಿಕೊಳ್ಳುತ್ತ ಹಣೆಯ ಮೇಲಿನ ಬೆವರನ್ನು ಒರೆಸಿಕೊಳ್ಳುತ್ತಾ 'ಯಾವಾಗಲೂ ಹಿಂಗೆ ನೋಡು ಮಹಾರಾಯ... ನಡಿಯಪ್ಪ ಎಲ್ಲಾದ್ರೂ ತಲೆ ಮರೆಸಿಕೊಂಡು ಹೋಗಾಣ... ಸಾಯ್ಲಿ' ಅಂತ ಚಪ್ಪಲಿಗಳನ್ನು ಮೆಟ್ಟಕೊಂಡು ಬೀದಿಗೆ ಬಿದ್ದ. ಅವನ ಹಿಂದೆ ಇವನೂ.

2

ಇಬ್ಬರೂ ಎಣ್ಣೆಯಂತೆ ಕುದಿವ ಬೀದಿಗೆ ಬಿದ್ದರು. ಸೂರ್ಯ ಕೊಂಚ ಮೃದುವಾಗಿದ್ದರೂ ಗಾಳಿ ಉಸ್ ಅನ್ನುತ್ತಿತ್ತು. ಮನಸ್ಸುಗಳ ಬೇಗುದಿ ಹತ್ತಿಕ್ಕಲು ಅರ್ಥವಿಲ್ಲದ-ಅಸಂಬದ್ಧದ ಹತ್ತಾರು ಮಾತುಗಳಾಡುತ್ತಾ ಸರ್ಕಲ್ ರೆಸ್ಟೊರೆಂಟ್ ಹೊಕ್ಕರು. ಸಂಸಾರದ ಆವಿಗೆಯಲ್ಲಿ ಕುದ್ದುಹೋದ ಮಡಕೆಯಂತೆ ಮೋಹನನ ಮುಖ ಸುಕ್ಕುಗಟ್ಟಿ ತಲೆ ಬೋಳಾಗಿ ಅಲ್ಲಲ್ಲಿ ಬಿಳಿ ಕೂದಲುಗಳು ಹೊಳೆಯುತ್ತಿದ್ದವು. ಕರ್ಚಿಫ್‌ನಿಂದ ಗಾಳಿ ಬೀಸಿಕೊಳ್ಳುತ್ತಾ ಸಪ್ಲೆಯರ್ ತಂದಿಕ್ಕಿದ ಗ್ಲಾಸ ನೀರನ್ನು ಗಟಗಟ ಕುಡಿದವನೇ 'ಇದನ್ನೆಲ್ಲಾ ನೋಡಕ್ಕೆ ಬಂದೇನಯ್ಯಾ' ಅಂದ ಮೋಹನ.

'ನನ್ನ ಸಂಸಾರದ ತಾಪತ್ರಯ ಮರಿಲೀಕ್ಕೆಂತಾ ಇಲ್ಲಿಗೆ ಬಂದು, ನಿನ್ನ ಸಂಸಾರದ ದುಃಖದಲ್ಲಿ ಸಿಕ್ಕಿ ಕೊಂಡಾಂಗಾತು' ಅಂದ. ಅವ ಸಪ್ಲೇಯರ್‌ಗೆ ಎರಡು ಚಹ ತರಲಿಕ್ಕೆ ಹೇಳಿ ತಾನೊಂದು ಸಿಗರೇಟು ಹಚ್ಚಿಕೊಂಡು ಮೋಹನನತ್ತ ಪ್ಯಾಕ್ ಒಡ್ಡಿದ. ಹೊಟೆಲ್ ಕಲಕಲ ಅನ್ನುತಿತ್ತು. ಫ್ಯಾನುಗಳು ಭರಗುಟ್ಟುತ್ತಿದ್ದವು. ಅಂಥ ಭರಗಟ್ಟುವಿಕೆಯ ನಡುವೆಯೂ ಸಪ್ಲೈಯರುಗಳು ಬೆವರು ಸುರಿಸುತ್ತಾ ಓಡಾಡುತ್ತಿದ್ದರು.

ಸಿಗರೇಟಿನ ಹೊಗೆ ಗಂಟಲಿಗಿಳಿದ ಸುಖ ಅನುಭವಿಸುತ್ತಾ ಅವ 'ಅಲ್ಲಯ್ಯಾ ಇದ್ನೆಲ್ಲಾ ಯಾಕಿಂಗೆ ಮನಸ್ಸಿಗಚ್ಚಿಕೊಂತಿಯಾ... ಈ ಮದುವೆ ಈ ನೌಕರಿ. ಈ ಸಂಬಂಧಗಳೆಲ್ಲಾ ಧಕ್ಕನೆ ಎಲ್ಲೊ ನಡೆದ ಆ್ಯಕ್ಸಿಡೆಂಟ್‌ಗಳಂತೆ. ಏನಾಯ್ತು ಅಂತ ಯೋಚ್ನೆ ಮಾಡುವುದರೊಳಗೆ ಎಲ್ಲ ಮುಗಿದುಬಿಟ್ಟಿರುತ್ತೆ. ಈಗ ಈಗಿರುವ ಸ್ಥಿತಿಯಲ್ಲಿ ಹೇಗೆ ನೆಮ್ಮದಿಯಾಗಿರೋಕೆ ಸಾಧ್ಯ ಅನ್ನೋದನ್ನಷ್ಟೇ ಕುರಿತು ಯೋಚ್ನೆ ಮಾಡಬಹುದೇ ಹೊರತು, ಇಡೀ ಸ್ಥಿತಿಯನ್ನು ಹೊಸದಾಗಿ ಪುನರ್‌ನಿರ್ಮಿಸುವ ಕಾಲ ಮುಗಿದು ಹೋಗಿ ಬಿಟ್ಟಿದೆ ಮೋಹನ.'

ಅವ ಹೇಳಿದ ಯಾವ ಮಾತಿಗೂ ಮನತೂಗದೆ ಮೋಹನ ಸಪ್ಲೇಯರ್ ತಂದಿಟ್ಟ ಲೋಟ ಎತ್ತಿಗೊಂಡು ಅನ್ಯಮನಸ್ಕನಂತೆ 'ನೀ ಹೇಳುವಷ್ಟು ಸುಲಭ ಇದ್ದಿದ್ದರೆ... ಬಿಡು.... ನಿನ್ನ ಹತ್ರ ಏನ ಹೇಳ್ಲಿ' ಅಂದ.

'ನೀನು ಹೇಳದಿದ್ದರೂ ನನಗೆ ಅರ್ಥವಾಗುತ್ತೆ ಮೋಹನ. ನಿನ್ನೆಲ್ಲಾ ದುಃಖಕ್ಕೂ ನಿನ್ನ ಹೆಂಡ್ತಿನ ಕಾರಣಾಂತ ನೀ ನಿರ್ಧರಿಸಿಕೊಂಡು ಬಿಟ್ಟಿದಿ. ನಿನ್ನ ಮನೆಯವರೂ ಹಂಗೆ.... ಹೀಗಾಗಿ ಪ್ರತಿಯೊಂದು ಹೆಜ್ಜೆಯಲ್ಲೂ ಇಬ್ಬರೂ ತಪ್ಪು ಹುಡುಕಲು ತುದಿಗಾಲಲ್ಲಿ ನಿಂತಿರುತ್ತೀರಿ. ಸಾರಿನಲ್ಲಿ ಕೊಂಚ ಉಪ್ಪು

ಜಾಸ್ತಿಯಾದರೆ ನಿನಗೆ ಕೆಂಡದಂತಹ ಕೋಪ ಬರುತ್ತೆ. ನೀನು ಅರ್ಧಗಂಟೆ ತಡವಾಗಿ ಮನೆಗೆ ಹೋದ್ರೆ ನಿನ್ನಾಕೆಗೆ ನಿನ್ನ ಮೇಲೆ ಸಂಶಯ ಬರ್ತದೆ. ಇದಕ್ಕೆಲ್ಲಾ ಕೊನೆ ಇದೆಯಾ. ಇದೊಂದು ಕೊಕ್ಕೊ ಆಟ ಇದ್ದಂಗೆ'

ಮಾತು ಮುಗಿಸಿ ಸಿಗರೇಟಿನ ಹೊಗೆಯಲ್ಲಿ ಅವ ಕಣ್ಣು ನೆಟ್ಟ. ರಸ್ತೆಗಳಿಗೆ ಸಂಜೆ-ಕೆಂಪು ಚೆಲ್ಲತೊಡಗಿತು. ಗುಡ್ಡದ ನೆರಳುಗಳು ಬೀದಿಯಲ್ಲಿ ಹರಿಯತೊಡಗಿದವು. ಬಿಸಿಲ ಭಯಕ್ಕೆ ಹಗಲು ಮನೆಯಲ್ಲಿ ಅವಿತಿದ್ದ ಜನ ಈಗ ಕಾರು, ಬೈಕು, ರಿಕ್ಷಾಗಳಲ್ಲಿ ಕಾಲ್ನಡಿಗೆಯಲ್ಲಿ ಇಡೀ ದುರ್ಗಕ್ಕೆ ಒಮ್ಮೆಲೆ ಜೀವ ಬಂದಂತೆ ರಸ್ತೆ ತುಂಬಿಕೊಂಡರು. ಬರಿದಾದ ಟೀ ಬಸಿಯನ್ನು ಕೆಳಗಿಟ್ಟ ಮೋಹನ ಅವನ ಮುಖ ನೋಡಿ,

'ನನ್ನ ಕಷ್ಟಗಳನ್ನ ಯಾರ ಹತ್ರ ಹೇಳಿಕೊಳ್ಳಲ್ಲಯ್ಯ. ಎಂಥ ಮಿತ್ರನ ಹತ್ತಿರವೂ ಬಿಚ್ಚಿಕೊಂಡು ಹಗುರಾಗಲಾರದಷ್ಟು ಭಾರವಾಗಿವೆ ಕಣಯ್ಯ ಅವು. ನನ್ನ ಮನೆಯವರ ಮುಖವನ್ನು ನೀನು ಸರಿಯಾಗಿ ನೋಡಿದೆಯಾ. ಮುಖ ಕಪ್ಪಾಗಿಲ್ಲವೆ. ಅದೆಲ್ಲಾ ಏನೂ ಅಂತ ಗೊತ್ತಾದರೆ ನೀನು ದಂಗಾಗಿ ಹೋಗ್ತಿಯಾ. ಏನು ಹೇಳ್ಲಿ. ಆಕೆ ಈಗ ನಿನಗೆ ಹೇಳಲಾರದ ಖಾಯಿಲೆಯ ಪೇಶಂಟ್ ಅದು ವಾಸಿಯಾಗದ ಹೊರತು ಮಗುಗೆ ಹಾಲು ಕುಡಿಸಬಾರ್ದಂತೆ. ನಾನು ಆಕೆ ಜೊತೆ ಕೂಡಬಾರದಂತೆ. ಮಕ್ಕಳು ಆಕೆ ಹತ್ತಿರ ಇರಬಾರದಂತೆ. ಹುಡುಗರನ್ನ ಊರಿಗೆ ಕಳ್ಸಿದ್ದೇನೆ. ನಂದಿರಲಿ. ಈಗ ತಾನೆ ಈ ಲೋಕಕ್ಕೆ ಬಂದಿರುವ ಆ ಹಸುಗೂಸು ಏನು ಪಾಪ ಮಾಡಿತಪ್ಪಾ. ತಾಯಿಯ ಹಾಲಿಲ್ಲದೆ ಹಸುಗೂಸನ್ನ ಬೆಳೆಸುವ ಕಷ್ಟ... ಏನು ಹೇಳ್ಲಿ... ಇಡೀ ರಾತ್ರಿ ತಲೆ ಚಿಟ್ಟಿಡಿವಂತೆ ಒಂದೇ ಸಮನೆ ಅರಚುತ್ತದೆ. ನಾನೆಷ್ಟೋ ತಿಂಗಳು ಸರಿಯಾಗಿ ಕಣ್ಣು ಮುಚ್ಚಿ ನೆಮ್ಮದಿಯಾಗಿ ನಿದ್ದೆ ಮಾಡಿಲ್ಲ ಕಣಯ್ಯ. ಇಂಥ ಸುಖಕ್ಕಾಗಿ ಆಕೆ ಹಠ ಮಾಡಿ ಹಡದಳೇ. ಇದನ್ನೆಲ್ಲಾ ಯಾರಿಗೆ ಹೇಳಲಿ. ಕೇಳಿದವರು ಮಂದಿ ಮುಂದೆ ಹೇಳ್ಕೋತ ನಗುವುದಿಲ್ಲವೆ. ನಿನ್ನಾಣೆ ಹೇಳ್ತಿನಿ. ಆಕೆ ಜೊತೆ ಮಲಗ್ದ ಒಂದು ವರ್ಷಾವಾಯ್ತೋ. ಸಮಧಾನ ಮಾಡ್ತಿಯಲ್ಲಾ ನಿನ್ನ ಕೈಲಿ ಆಗ್ತಾದ.'

ಕೇಳುತ್ತ ಕೇಳುತ್ತ ಅವನ ತಲೆಯಲ್ಲಿ ಪ್ರಚಂಡವಾದ ಬಿರುಗಾಳಿಯೊಂದು ಒಮ್ಮೆಗೆ ಬೀಸಿ, ಜಗತ್ತೆಲ್ಲಾ ಕೊಚ್ಚಿಕೊಂಡು ಹೋದಂತೆ ಭಯದಿಂದ ಕಣ್ಣು ಮುಚ್ಚಿ 'ಸಾಕು ಮೋಹನ' ಅಂದ. ಇಬ್ಬರೂ ಮೇಲೆದ್ದು ಹೊರ ಬಂದರು. 'ಮನೆಗೆ ಬರ್ತಿಯೋ, ಎಲ್ಲಾದರೂ ಹೋಗಬೇಕೋ' ಅಂದ ಮೋಹನ.

ಇನ್ನು ಮೋಹನನ ಮನೆಗೆ ಹೋಗಿ ಇನ್ನಿಲ್ಲದ ರಾದ್ಧಾಂತಗಳಿಗೆ ಮೂಕ ಸಾಕ್ಷಿಯೋ, ಪ್ರೇಕ್ಷಕನೋ ಆಗುವುದು ಬೇಡವಾಗಿತ್ತವನಿಗೆ. ಮತ್ತು ತಾನೀಗ ಯಾರನ್ನು ಭೇಟಿ ಮಾಡಲೋ ಹೊರಟಿರುವನೋ ಅವರ ಹೆಸರು ಕೂಡ ಹೇಳುವ ಇಚ್ಛೆ ಇಲ್ಲವಾಗಿ -

'ಇಲ್ಲೇ ಹಿಂಗೆ ಸಿಟಿ ಕಡೆ ಅಡ್ಡಾಡಿ ಬರ್ತೀನಿ. ಸಂಜೆ ಬರ್ತೀನಿ. ಸೂಟ್‌ಕೇಸ್ ಅಲ್ಲೆ ಇರಲಿ' ಅಂದ ಅವ.

'ಇದ್ನೆಲ್ಲಾ ತಲೆಗೆ ಹಾಕ್ಕೋಬೇಡಾ. ಸಂಜೆ ಬಾ. ಎಲ್ಲಾದರೂ ಗುಂಡು ಹಾಕೋಣ. ನನ್ನ ಫ್ರೆಂಡ್ ಬಸವರಾಜು ಅನ್ನೋರು ಕಂಪನಿ ಕೊಡ್ತಾರೆ' ಅಂದ ಮೋಹನ ಮನೆಯ ದಾರಿ ಹಿಡಿದ ಅವನಿಗೆ ಬೀಳ್ಕೊಡುತ್ತಾ.

3

'ಯಾವಾಗ ಬಂದ್ರಿ' ಅಂದಳು ಆಕೆ. ಇಡೀ ದಿನದ ದುಡಿತದ ಆಯಾಸದಿಂದ, ಸುಸ್ತಿನಿಂದ ಮುಖ ಕಳಾಹೀನವಾಗಿತ್ತು. ಕ್ಷಣ ಕ್ಷಣಕ್ಕೂ ಮನೆಯನ್ನು ಸೇರಬೇಕೆಂಬ ಆತುರ ಆಕೆಯ ಪ್ರತಿಯೊಂದು ಚಲನವಲನಗಳಲ್ಲೂ, ಮಾತಿನ ಓಘದಲ್ಲೂ ಇಣುಕುತ್ತಿತ್ತು. ಸಂಜೆಯ ಬೀದಿ ದೀಪಗಳು ಹತ್ತಿ ಕ್ಷೀಣವಾಗಿ ಉರಿಯುತ್ತಿದ್ದವು. ಹಗಲಿನಷ್ಟು ಸೆಖೆ ಇರದಿದ್ದರೂ ಹವೆ- ಧಗೆಧಗೆಯಾಗಿ ಗಂಟಲು ಒಣಗುತ್ತಿತ್ತು.

## ಪ್ರಯತ್ನ



ಸಿಗಬೇಕೆ
ಮುತ್ತು
ಇಳಿಯಬೇಕು
'ಪ್ರೀತಿ'ಯೆಂಬ
ಸಾಗರದ ಆಳಕ್ಕೆ

■ ಮಂಜುನಾಥ ಸ್ವಾಮಿ ಕೆ.ಎಂ.

'ಮೋಹನನ್ನ ನೋಡೋಣಾಂತ ಬಂದಿದ್ದೆ. ಆಕಸ್ಮಾತ್ ನೀವು ಬೀದಿಯಲ್ಲಿ ಸಿಕ್ಕಿ ಬಿಟ್ರಿ' (ನಿಮ್ಮನ್ನ ನೋಡೋಣಾಂತಲೇ ಬಂದೆ. ಆ ಬೀದಿಯಲ್ಲಿ ನಿಮ್ಮನ್ನೆ ಕಾಯುತ್ತಾ ನಿಂತಿದ್ದೆ)

'ಆರಾಮ ಇದ್ದೀರಾ'

'ಓ. ಆರಾಮ್... ಹೊಟ್ಟೆ ಪಾಡಿಗೊಂದು ನೌಕರಿ, ಅನುವು-ಆಪತ್ತು ನೋಡಿಕೊಕೊಳ್ಳೊ ಗಂಡ, ಮತ್ತೇನ ಬೇಕು'

(ಮಕ್ಕಳಿಲ್ಲ, ಕುಡಿತಾರೆ. ಬಹಳ ಸಂಶಯ ತಿಂಗಳ ಸಂಬಳ ಆತನ ಕೈಗೆ ಹಾಕಬೇಕು)

'ಅರ್ಜೆಂಟಾಗಿ ಮನೆಗೆ ಹೋಗಬೇಕು ಟೀ ಕುಡಿಯುತ್ತ ಏನಾದರೂ ಮಾತಾಡಬಹುದಲ್ಲ'

(ಕಾಲವನ್ನೆ ಮರೆತು ಬಿಡ್ತಿದ್ದವಲ್ಲ. ಮಾತು, ಮಾತು ಎಂಥ ಕಾಲ ಅದು)

'ಮಾತಾಡೋದು ಏನಿದೆ ಏನ ಮಾತಾಡಿದರೂ ಹಿಂದೆ ಹೋದದ್ದು ಹೊಳ್ಳಿ ಬರುತ್ತಾ'

(ಹಿಂದಿನದ್ದೇ ಈಗ ಇಂದಿನದನ್ನ ನೋಯಿಸ್ತಾ ಇದೆಯಲ್ಲಾ)

'ಹೆಂಗಿದೆ ಸಂಸಾರ'

'ಹಿಂಗೆ.... ಎಲ್ಲರ ಸಂಸಾರದಂಗೆ'

(ಸಂಸಾರ ಅನ್ನಬೇಕೆ? ಜೈಲು ನಾಲ್ಕು ಗೋಡೆಯ ಬಂದಿಖಾನೆ)

'ಎಲ್ಲರ ಸಂಸಾರದಲ್ಲೂ ದುಃಖ, ಜಗಳ, ಬೇಸರ ಆಗಾಗ ಸಂತೋಷ'

'ಹಂಗೆ ನಮ್ಮದೂ' (ಸಂತೋಷ ಬಿಟ್ಟು)

ಟೀ ಬಂತು. ಅಪರಿಚಿತರಂತೆ ಕುಡಿದರು. ಮಾತುಗಳಿಗೆ ಮುಖ ನೋಡಿದರು.

'ಮಕ್ಕಳು?'

(ಯಾರಿಗೆ ನಾನೇ ತಾಯಿ, ನಾನೇ ಕೂಸು)

'ನಮ್ಮದೇನು ರಾಜ ವಂಶವೇ ಮಕ್ಕಳಿಲ್ಲಾಂತ ಕೊರಗೋಕೆ' (ಮತ್ತೆ ಮುಖ ಯಾಕೆ ಸುಕ್ಕುಗಟ್ಟಿದೆ. ಕಣ್ಣರೆಪ್ಪೆ ಕೆಳಗೆ ಅದೇನು ಕಪ್ಪು ಗೆರೆ. ಈ ವಯಸ್ಸಿಗೆ ನೆತ್ತಿಯಲ್ಲೇಕೆ ಬಿಳಿಗೂದಲು)

'ನಿಮ್ಮ ಹತ್ರ ಒಂದು ರಿಕ್ವೆಸ್ಟ್ ಮಾಡ್ತಾ. ಇನ್ಮೇಲೆ ಯಾವಾಗ್ಲೂ ನನ್ನ ಹುಡ್ಕೊಂಡು ಬರ್ಬೇಡಿ ಪ್ಲೀಸ್ (ಬರ್ತಾ ಇದ್ದರೆ ಸಂತೋಷ. ಬೇಡ ಅಂದರೂ)

ನಾನೀಗ ನೆಮ್ಮದಿಯಾಗಿದ್ದೇನೆ (ಅವ್ರು, ಮನುಷ್ಯರೇ ಅಲ್ಲ. ಸಂಶಯ ಪಿಶಾಚಿ. ಆ ಸಂಶಯದಲ್ಲೂ ನನ್ನ ಬಗ್ಗೆ ಗಾಢ ಪ್ರೀತಿ ಇರಬಹುದಲ್ವೇ. ಸಂತಾನ ಶಕ್ತಿಯಿಲ್ಲದ ಆತ ನನ್ನನ್ನು ತೃಪ್ತಿಪಡಿಸಲಿಕ್ಕೆ ಆಗದೆ ಹೀಗೆ ಹಿಂಸಿಸುತ್ತಿರಬಹುದು. ಆ ಹಿಂಸೆಯಲ್ಲೂ ಲೈಂಗಿಕ ತೃಪ್ತಿಗೆ ಸಮನಾದ ಮತ್ತಾವುದೋ ತೃಪ್ತಿ ಇರಬಹುದಲ್ವೇ)

'ನಾವು ಬಯಸಿದ್ದು ನಮ್ಮ ಬದುಕಲ್ಲಿ ಸಿಗದೆ ಇರಬಹುದು. ಆದರೆ ಸಿಕ್ಕದ್ದನ್ನು ಸಿಗದೇ ಇರೋ ಯಾವುದೋ ಒಂದರ ಹಪಾಹಪಿತನದ ಹಳಹಳಿಕೆಯಲ್ಲಿ ಕಳಕೊಳ್ಳಬಾರದು ಅನ್ನೋ ತತ್ವಕ್ಕೆ ಬಂದು ಬಿಟ್ಟಿದ್ದೀನಿ' (ಹೆಣ್ಣಿಗೆ ಮನೆಯೇ ಸರ್ವಸ್ವ... ನಾ ಈಗ ಹುಡುಗಿಯಲ್ಲ, ಹೆಣ್ಣು)

ಬಿಲ್ ಬಂತು. ಹೊರಗೆ ಕತ್ತಲಲ್ಲಿ ಇಷ್ಟೇ ಮುಳುಗಲಿರುವ ರಾಮದುರ್ಗ. ಈಕೆ. ಆ ಮೋಹನ ಈ ದುರ್ಗದ ದುರದಮ್ಯವಾದ ದುಸ್ಸಾಹಸದ ದುರ್ಭೇದ್ಯವಾದ ಕೋಟೆಯ ಸುರಂಗದೊಳಗೆ ಇಷ್ಟಿಷ್ಟೇ ಕೊಚ್ಚಿ ಹೋಗುತ್ತಿರುವ ಬಲಿಪಶುಗಳಂತೆ. ಅವನ ಕೈಯಿಂದ ಆಕೆ ಬಿಲ್ ಕಸಿದುಕೊಂಡು' ನೀವು ನನ್ನ ಅನ್‌ವಾಂಟೆಡ್ ಗೆಸ್ಟ್, ಅಲ್ವೇ ನಾನೇ ಕೊಡ್ತಿನಿ ಬಿಲ್ಲನ್ನಾ' ಅಂತ ಆಕೆ ಮೇಲೆದ್ದಳು. ಆಕೆಯನ್ನು ಹಿಂಬಾಲಿಸಲೆಂದು ಅವನೂ

ಎದ್ದ

'ಬರ್ರಿ ಮನೆಯಲ್ಲಿ ಅವರು ಕಾಯ್ತಾ ಇರ್ತಾರೆ' ದುಡುದುಡು ನಡೆದಳು. (ಹಿಂಬಾಲಿಸಬೇಡಿ. ಅವರು ಕಾದು ಕೆಂಡವಾಗಿದ್ದಾರೆ)

4

ನಿಸರ್ಗ ಗಾರ್ಡನ್ ಬಾರ್‌ನಲ್ಲಿ ಥಂಡಿ ಗಾಳಿ. ಮಾದಕದ ಬೆಳಕಲ್ಲಿ ಮೊಬೈಕನಲ್ಲಿ ಬಂದ ವ್ಯಕ್ತಿಯನ್ನು ಮೋಹನ 'ಇವರು ಬಸವರಾಜು, ಎಜ್ಯುಕೇಷನ್ ಡಿಪಾರ್ಟ್‌ಮೆಂಟನಲ್ಲಿ ಎಫ್.ಡಿ.ಸಿ ಇದ್ದಾರೆ. ಇವ್ರ ಮಿಸೆಸ್ ಗೌರಿ ಅಂತ ಪೋಸ್ಟ್ ಆಫೀಸಿನಲ್ಲಿದ್ದಾರೆ....' ಮುಂದೆ ಮೋಹನ ಏನು ಮಾತಾಡಿದನೋ ನರನರ ಗುಂಟ ಕರೆಂಟ್ ಝ್ಯುಂ ಎಂದು ಹರಿದು ತಲೆ ಗರಗರ ತಿರುಗಿ ಕಣ್ಣಿಗೆ ಕತ್ತಲೆ ಕವಿದು ಅವ ಏನೂ ಪ್ರತಿಕ್ರಿಯಿಸದೆ ನಿಂತಿದ್ದವ ಧಡಕ್ಕನೆ ಕುರ್ಚಿಯೊಳಕ್ಕೆ ಕುಸಿದ.

'ಗೌರಿ' ಎನ್ನುವ ಹೆಸರು ಸಾವಿರ ಸಲ ತಲೆಯೊಳಗೆ ಗರಗರ ತಿರುಗಿ ಮೋಹನ ಪರಿಚಯಿಸಿದ ವ್ಯಕ್ತಿಯನ್ನು ಅವ ನೋಡಿದ. ನಸುಗಪ್ಪನೆಯ ಅಮಿತಾಬ ಬಚ್ಚನ್ ಸ್ಟೈಲ್‌ನಲ್ಲಿ ಹಿಂದಕ್ಕೆ ಕೂದಲ ಬಾಚಿಕೊಂಡ ಸಮಮಟ್ಟದ ನೀಲಿ ಕಲರ್‌ನ ಆಫ್ ಶರ್ಟನ್ನು ಬಿಳಿ ಪ್ಯಾಂಟೊಳಕ್ಕೆ ಇನ್‌ಸರ್ಟ ಮಾಡಿದ ಆ ವ್ಯಕ್ತಿ ಇವನನ್ನು ಆಪಾದ ಮಸ್ತಕವಾಗಿ ಪರೀಕ್ಷಿಸುವನಂತೆ ನೋಡಿ 'ಹಲೋ ಗ್ಲ್ಯಾಡ್ ಟು ಮೀಟ್‌ಯೂ' ಎಂದ ಕೈ ಮುಂಚಾಚಿದ.

ಒಂದಾದರೊಂದರ ಮೇಲೆ ಮತ್ತೊಂದು ಬೀರನ್ನು ಹೀರುತ್ತಾ ಚಿಪ್ಸ್‌ಗಳನ್ನು ಚಪ್ಪರಿಸುತ್ತ ಸಿಗರೇಟುಗಳ ಉರಿಸುತ್ತ ಆ ಮೂವರು ಏನೇನೊ ವಿಷಯಗಳನ್ನು ತಮ್ಮ ಕಿರಿಕಿರಿಯ ನೌಕರಿ, ಭ್ರಷ್ಟ ರಾಜಕಾರಣ ಸಿನಿಮಾ ಇತ್ಯಾದಿ ಮಾತಾಡುತ್ತಾ ಮಾತಾಡುತ್ತಾ ಗರಂ ಆದರು. ಮೋಹನ ಕೆಲವು ಕೆಟ್ಟ ಜೋಕ್‌ಗಳನ್ನು ಹೇಳಿ ನಗಿಸಿದವ 'ಏ ಬೀರ್ ಎಷ್ಟು ಕುಡ್ದರೂ ಕಿಕ್ ಕೊಡಲ್ಲಮ್ಮಾ. ಒಂದು ಕ್ವಾಟರ್ ವಿಸ್ಕಿಯೋ ಒಂದು ಕ್ವಾಟರ್ ರಮ್ಮೋ ತರ್ಸೋಣಾ' ಅಂದವ ಉಳಿದವರು ಹಾಂ ಹೂಂ ಅನ್ನುವುದರೊಳಗೆ ಒಂದು ಕ್ವಾಟರ್ ರಮ್ ತರಿಸಿ ಮೂವರ ಗ್ಲಾಸಿಗೂ ಗಳಗಳ ಸುರಿದು... 'ಟುಸ್' ಅಂತ ಸೋಡಾ ಬಾಟಲ್ ಓಪನ್ ಮಾಡಿ ಬರುಗು ಬರುಗು ನೊರೆ ಉಕ್ಕಿ ಕೆಳಗೆ ಹರಿವವರೆಗೂ ಸುರಿದು 'ಚೀಯರ್ಸ್' ಅಂದು ಚೀರಿ ಗಟಗಟ ಅರ್ಧ ಗ್ಲಾಸು ಖಾಲಿ ಮಾಡಿದ. ತನ್ನ ದುಃಖಗಳನ್ನೆಲ್ಲಾ ಈ ಬಾಟಲಿಗಳ ಬುರುಗಲ್ಲಿ ಒಮ್ಮೆಗೆ ತೊಳೆದು ಬಿಡವೋಪಾದಿಯಲ್ಲಿ ಉನ್ಮಾದದಿಂದ ಉಬ್ಬೇರುತ್ತಿದ್ದ.

'ನೋಡಲೇ ನಂದು ನನ್ನ ಫ್ರೆಂಡ್ ಬಸವರಾಜುದು ಸೇಮ್ ಫ್ಯಾಮಿಲಿ ಪ್ರಾಬ್ಲಮ್. ಅದಕ್ಕೆ ನಮ್ದು ಸೇಮ್ ರೆಮಡಿ. ದಿನಾ ಸಂಜಿ ಮುಂದ ಹಿಂಗೆ ಗುಂಡ ಹಾಕೋದು' ಕಕ್ಕಕ್ಕ ನಗುತ್ತಾ ಮೋಹನ ಬಸವರಾಜುವಿನ ಭುಜದ ಮೇಲೆ ಕೈ ಇಕ್ಕಿ 'ಏನ್ ಫ್ರೆಂಡ್' ಅಂತ ಮುಖವನ್ನು ಅವನ ಕಿವಿಯ ಹತ್ತಿರ ಹೊಯ್ದು ಉಸುರಿದ. ಬಸವರಾಜುಗೆ ಇದ್ದಕ್ಕಿದ್ದಂತೆ ಅಪರಿಚಿತನ ಮುಂದೆ ತನ್ನ ಸಂಸಾರದ ತಾಪತ್ರಯಗಳನ್ನು ಒಮ್ಮೆಗೆ ತೆರದಿಡಲಾರದವನಂತೆ, ಆ ಹಾಳು ವಿಷಯ ಇಲ್ಯಾಕೆ ಗುರು. ಬ್ಲಡಿ ಥಿಂಗ್ ಫಕ್ ಇಟ್' ಅಂತ ಹೊಗೆಯುಗಳಿ ಅವನ ಮುಖ ನೋಡಿದ. ಒಂದು ಬಗೆಯ ಔದಾಸೀನ್ಯತೆ ತೇಲಿ ಹೋಯ್ತು ಅವನ ಕಣ್ಣಲ್ಲಿ.

'ಬಟ್ ನಾನೇನ ಬಯ್ಲಿ, ಬಡಿಲಿ ನನ್ನ ಹೆಂಡ್ತಿ ಅಡುಗೆ ಚೆನ್ನಾಗಿ ಮಾಡ್ತಾಳಪ್ಪ ಆಕೆ ಕೈಯೊಳಗಿನ ರೊಟ್ಟಿ ಹಪ್ಪಳ ಹಪ್ಪಳ ಇದ್ದಂಗೆ ನಾನಿಂಗೆ ಕುಡ್ದು ಹೋದರೂ ತುಟಿಕ್ ಪಿಟಕ್ ಅನ್ನಾಂಗಿಲ್ಲ. ನಮ್ಮ ಕೆಟ್ಟ ಚಟ ನೋಡಿದರಾ ಹಳ್ಳಿ ಹುಡಗೇರ ಚಲೋ...' ಅಂತ ಕುಡಿದ ನಶೆಯಲ್ಲಿ ಹೆಂಡ್ತಿಯ ಗುಣಗಾನಕ್ಕಿಳಿದ ಮೋಹನ 'ನೀ ಏನಂತಿಯೋ ನೌಕರಿ ಮಾಡಾಕಿ ಕೈ ಹಿಡಿದವಾ ತಿಂಗಳಾ ತಿಂಗಳಾ ಚಿನ್ನದ ತತ್ತಿ ಇಡೋ ಕೋಳಿನಾ ಹಿಡ್ದನಾ ನನ್ನ ಗೆಣೆಯಾ ಹ... ಹ....' ಅಂದ. ಮೋಹನನ ಮಾತಿಗೆ ಬಸವರಾಜು 'ಚಿನ್ನ ಇಡೋ ತತ್ತಿ ಮ್ಯಾಲ ಮಂದಿ ಕಣ್ಣು ಬಾಳಾಪಾ.... ಅವ್ನ ಕಾಯ್ದೆರಾಗ ರಗಡಕ್ಕತಿ' ಅಂದ ಅವ ಮತ್ತೆ ಇವನ ಮುಖ ನೋಡಿದ.

ಒಬ್ಬ ಕುಡಿದ ನಿಶೆಯಲ್ಲಿ, ಮತ್ತೊಬ್ಬಾತ ಮತ್ತಾವುದೋ ಮತ್ತಿನಲ್ಲಿ ಮಾತುಗಳನ್ನ ಕತ್ತಿಯಂತೆ ಎತ್ತೆತ್ತಲೋ ಝಳಪಿಸುವ ಅನುಭವವಾಗಿ ಅವ...

'ನೌಕರಿ ಮಾಡ್ಲಿ... ಮಾಡದೇ ಇರಲಿ ಹೆಣ್ಣು ಹೆಣ್ಣೇ ಕಣ್ರಪ್ಪ... ನೌಕರಿ ಮಾಡ್ತಿನಿಂತಾ ಅಡುಗೆ ಮಾಡೋದು ಬಿಡಕಾಗ್ತದೆ. ಮಗುನ ನೋಡಕೊಳ್ಳದೇ ಇರಕಾಗ್ತದ. ಎಷ್ಟೆ ಸುಸ್ತಾಗಿದ್ದರೂ ಸಂಜೆ ಗಂಡ ಕರೆದರೆ ಒಲ್ಲೇ ಅನ್ನಕಾಗ್ತದ. ಪ್ರೆಗ್ನೆಂಟ್ ಆಗ್ದೆ ಇರಕಾಗ್ತದ. ಫ್ಯಾಮಿಲಿ ಅಂದ್ರೆ ಅದೊಂದು ಶಾಕ್ ಅಬ್ಸರವರ್ ಇದ್ದಂಗೆ. ಗುಡಿ ಇದ್ದಂಗೆ. ತಲಿ ಕೆಡ್ಸಿಕೊಂಡು ಹೊರಗಿಂದ ಬಂದವನಿಗೆ ಮನಿ ಸೇರಿದ ಕೂಡ್ಲೆ ಶಾಂತಿ ಸಿಗಬೇಕು. ಮನೆಯಲ್ಲಿ ಶಾಂತಿ ಸಿಗಲ್ಲಾಂದರೆ ಈ ಜಗತ್ತಿನಲ್ಲಿ ಮತ್ತೆಲ್ಲಿಯೂ ಶಾಂತಿ ಸಿಗಲ್ಲ ಕಣ್ರಯ್ಯಾ...' ಅವ ಇನ್ನು ಏನೇನು ಮಾತಾಡುತಿತ್ತಿದ್ದನೋ ಅಷ್ಟರಲ್ಲಿ ಬಸವರಾಜು ಅವನ ದೀರ್ಘ ಭಾಷಣ ರೂಪದ ಮಾತಿಗೆ ಅಸಹನೆಗೊಂಡವನಂತೆ 'ಏನಪ್ಪ ಮೋಹನ ನಿನ್ನ ಫ್ರೆಂಡು ಒಳ್ಳೆ ಫಿಲಾಸಫರ್ ಥರ. ನನ್ನ ಹೆಂಡ್ತಿನೂ ಹಿಂಗೆ ಕಣಯ್ಯ. ಸಹಜ ಮಾತಾಡೋಕೆ ಬರಲ್ಲ. ಏನ ಮಾತಾಡಿದ್ರೂ ಅದಕ್ಕೊಂದು ಬಣ್ಣ ಹಚ್ಚಿ ಹವಾ ತುಂಬಿ ಗಾಳಿಗೆ ಬಿಟ್ಟು ನೋಡ್ರಿ, ಅಂತ ತಲೆ ತಿನ್ತಾಳೆ' ಅಂತ ಒಮ್ಮೆಗೆ ಗ್ಲಾಸಿನ ತಳದಲ್ಲಿದ್ದ ರಮ್‌ನ್ನು ಖಾಲಿ ಮಾಡಿ ಗಡರ್ ಅಂತ ತೇಗಿದ.

ಅವ, ಮತ್ತು ಬಸವರಾಜು ಬೇಡ ಬೇಡವೆಂದರೂ ಮತ್ತೊಂದು ಕ್ವಾಟರ್‌ಗೆ ಆರ್ಡರ್ ಮಾಡಿದ ಮೋಹನ. ಮಧ್ಯಾಹ್ನ ನಡೆದ ಕಿರುಕದನವನ್ನು ಈಗ ಎನ್‌ಲಾರ್ಜ್ ಮಾಡುತ್ತಾ ತಾನು ಹೇಗೆ ಮೂರನೆ ಮಗುವಾಗುವುದನ್ನ ತಪ್ಪಿಸಲು ಪ್ರಯತ್ನ ಪಟ್ಟೆ ಎಂಬುದನ್ನು ರೋಚಕವಾಗಿ ಬಣ್ಣಿಸತೊಡಗಿದ. 'ಆಕೆ ಮತ್ತೆ ಪ್ರೆಗ್ನೆಂಟ್ ಆಗಬಾರ್ದುಂತ ಆಕೆಯ ಮುಟ್ಟಿನ ದಿನಗಳನ್ನ ಎಣಿಸಿಕೋತ ಸೇಫ್ ಪಿರಿಯಡ್‌ನಲ್ಲಿಯೇ ಕೂಡುತ್ತಿದ್ದೆ ಕಣ್ರಯ್ಯ ಕಳೆದ ಏಪ್ರಿಲ್‌ನಲ್ಲಿ ಬೆಂಗಳೂರಿಗೆಂದು ಒಂದು ವಾರ ಟ್ರೈನಿಂಗ್ ಹೋಗಿದ್ದೆ. ಸೇಫ್ ಪಿರಿಯಡ್‌ಗಳನ್ನ ಮರೆತು ಬಿಟ್ಟೆ, ಆಕೆನ ಕೇಳಿದೆ. ಇಪ್ಪತ್ತು ದಿನ ಆಯ್ತು ಅಂತ ಸುಳ್ಳು ಹೇಳಿದ್ಲು. ನಿರೋಧ ಬಳಸಿದರೆ ಮಜಾ ಸಿಗಲ್ಲಾಂತ ಹಂಗೆ ಕೂಡಿದೆ. ಪ್ರಗ್ನೆಂಟ್ ಆಗಿಬಿಟ್ಲಪ್ಪ...' ಸಿನೆಮಾದ ಕಥೆ ಕ್ಲೈಮಾಕ್ಸ್‌ಗೆ ಹೋಗಿ ಧಕ್ಕನೆ ಟುಸ್ ಆದಂತೆ.... 'ಅದರ ಪಾಪ ನಾನೀಗ ಅನುಭವಿಸ್ತಾ ಇದ್ದಿನ್ರಪ್ಪಾ. ಮನೆ ಬೇಡಾ ಮಕ್ಕಳು ಬೇಡ... ಹೆಂಡ್ರು ಬೇಡಾ ಶಿವಶಿವ' ಅಂತ ಮೋಹನ ಅಳುವ ದನಿ ತೆಗೆದ. ಬಿಯರ್.. ರಮ್... ಸಿಗರೇಟು.... ಕತ್ತಲು.... ಏಕಾಂತ ಒಂದರೊಳಗೊಂದು ಬೆರತು ಯಾವುದೋ ಅನೂಹ್ಯ ಮೋಡಿಗೆ ಒಳಗಾದವರಂತೆ ಮೋಹನ, ಬಸವರಾಜು ಅವರ ಗುಂಗಿನಲ್ಲಿ ತೇಲಿತೊಡಗಿದರು. ಮೋಹನ ಮಾತಿಂದ ಸ್ಫೂರ್ತಿಗೊಂಡವನಂತೆ ಬಸವರಾಜು 'ಅಯ್ಯಾ ಫ್ರೆಂಡ್ ನಿಂದು ಮಕ್ಕಳಾದವಲ್ಲಾಂತ ಸಮಸ್ಯೆ ನಂದ ನೋಡಯ್ಯಾ... ಮಕ್ಕಳಿಲ್ಲಾಂತ ಅಳುವ ಗೋಳು ನಮ್ದು ಎಷ್ಟೆಷ್ಟು ಡಾಕ್ಟರಿಗೆ ಏನೆಲ್ಲಾ ತೋರ್‍ಸಿದಿವಿ ಎಷ್ಟೆಲ್ಲಾ ಖರ್ಚು ಮಾಡಿದ್ವಿ, ನನ್ನ ಹೆಂಡ್ತಿ ಕಣ್ಣಾಗೆ ಕೂಸ ತೇಲ್ತಾವೆ. ಎದೆಯಾಗ ಹಾಡ ಹಾಡ್ತಾವ. 'ನಮ್ಮದೇನು ರಾಜ ವಂಶವೇ ಮಕ್ಕಳಾಗದಿದ್ರೆ ಸೂರೆ ಹೋತು...' ಅಂತಿನಿ ಕೇಳಲ್ಲಯ್ಯ ಆಕೆ. ನನ್ನ ಮೇಲೆ ಗುಮಾನಿ. ನನ್ನ ಗಂಡಸ್ತನದ ಬಗ್ಗೆ ಅನುಮಾನ. ನಾನು ಗಂಡ್ಸಲ್ಲವೆ ಗಂಡ್ಸು ಅಂತ ತೋರ್‍ಸಾಕೆ ಏನು ಮಾಡಬೇಕ್ರೋ...? ಬಸವರಾಜು ಮುಂದೆ ಮಾತಾಡದೆ ನಿಟ್ಟುಸಿರು ಬಿಟ್ಟ. ಗಾರ್ಡನ್ ಬಾರ್‌ನ ಗಿಡ-ಮರಗಳೆಲ್ಲ ಸಡನ್ ಆಗಿ ತಲೆತೂಗುವದನ್ನು ನಿಲ್ಲಿಸಿದವೇನೋ ಅನ್ನುವಷ್ಟು ಮೌನ ಕವಿಯಿತು. ಬಾರ್‌ನೊಳಗಿನ ಟೇಪ್ ರೆಕಾರ್ಡ ಏನೋ ಒದರುತ್ತಿತ್ತು. ತಲೆ 'ಗೀಂ' ಅಂತು ಮೋಹನ 'ಉಚ್ಚೆ ಹುಯ್ದು ಬರ್‍ತೀನೀ' ಎದ್ದು ಲ್ಯಾವಟ್ರಿಯ ದಿಕ್ಕಿನ ಕಡೆ ತಡವರಿಸುತ್ತಾ ಹೊಂಟ.

ಬಸವರಾಜು ಒಮ್ಮೆಗೆ ಅವನ ಕೈ ಹಿಡಿದು ಪಳ್ಳನೆ ನಕ್ಕು 'ಏನ್ ಫಿಲಾಸಫರ್ ನಾಟಕ ಆಡ್ತೀರಿ. ಕುಡ್ದಾಗಾದರೂ ಸತ್ಯ ಮಾತಾಡ್ರಲ್ಲ. ಇನ್ನೊಬ್ಬರ ಸತ್ಯ ಕೇಳಕೆ ಖುಷಿಯಾಗುತ್ತಲ್ಲ. ಈ ಸಂಜಿ ಮುಂದ ನನ್ನ ಹೆಂಡ್ತಿನಾ ನೀವು ಮೀಟ್ ಮಾಡ್ಲಿಲ್ವೆ, ಜನ್ಯೆನ್ ಫ್ರೆಂಡಾದರೆ ಮನಿಗೆ ಬಂದು ಬೇಟಿಯಾಗ್ರಲ... ಕದ್ದು ಮುಚ್ಚಿ ಬೇಟಿಯಾಗಕೆ ಜೀವನ ಕಾಲೇಜ್ ಅಲ್ಲಾ. ಅಂಡರ್‌ಸ್ಟ್ಯಾಂಡ್. ಡೊಂಟ್ ಬಿ ಸ್ಯಾಡಿಸ್ಟಿಕ್. ನಾನೀ ಹಿಪಾಕ್ರಟಿಕ್ ನೀಚರನ್ನ ಹೇಟ್ ಮಾಡ್ತಿನಿ....' ನಗುತ್ತಿದ್ದ ಬಸವರಾಜನ ಕಣ್ಣುಗಳು ಕುಡಿತದಿಂದ ಈಗಾಗಲೆ ಕೆಂಪು ಆಗಿದ್ದವು. ಮತ್ತೂ ಕೆಂಪಾದವು. ಅವನಿಗೆ ಕುಡಿದ ನಿಶೆಯಲ್ಲಾ ಜರ್‍ರನೆ ಇಳಿದು ತೊಡೆ ನಡುಗಿ ಇಡೀ ಭೂಮಂಡಲ ಅಲ್ಲೋಲ ಕಲ್ಲೋಲವಾದಂತೆ. 'ಸಾರಿ... ಬಸವರಾಜ್.... ಮಾತು ನಿಂತವು. ಮೋಹನ ದೂರದಿಂದ 'ಏನಾದ್ರೂ ತಿಂತಿರೇನೊ' ಅಂತ ಕೂಗುತ್ತ, ತೂರಾಡುತ್ತಾ ಅವರಿಬ್ಬರ ಹತ್ತಿರವೇ ಬಂದ.

■

# ನನ್ನ ಭವಿಷ್ಯ

■ ಗೋಪಿ ಹಿರೇಬೆಟ್ಟು

'ಚಿಲ್ಲರೆ ಏನಾದರೂ ಇಡಿ' ಎಂದ.
ಚಿಲ್ಲರೆ ಸಮಸ್ಯೆಯಿಂದ ಬೇಸತ್ತಿರುವ
ಜನರ ಬಗ್ಗೆ ಅವನು ಅರಿತಿರಬೇಕು.
ಮತ್ತೇನಾದರೂ ಇಡಲಿ ಎಂದು ಅವನ
ಊಹೆ. ನಾನು ಕಿಸೆಯಲ್ಲಿ ಇಲ್ಲದ
ಚಿಲ್ಲರೆಗಾಗಿ ಹುಡುಕಾಡಿದೆ. ನನ್ನ ಭವಿಷ್ಯ
ಅವ ಹೇಳುತ್ತಾನೆ. ಅವನ ಭವಿಷ್ಯ ನಮ್ಮ
ಕಾಣಿಕೆಯಲ್ಲಿದೆ. ನೋಟಿನ ಮೇಲಿನ
ನೋಟದ ಆಧಾರದಲ್ಲಿ ಭವಿಷ್ಯದ
ಸಾಲುಗಳು ನಿರ್ಧಾರ ಆಗುತ್ತವೆ!
ನನ್ನ ಐದು ರೂಪಾಯಿಗೆ
ಐದೇ ಸಾಲು !



"ಮೊದಲೇ ಹೇಳುತ್ತೇನೆ ನನ್ನ ಹಾರ್ಟ್ ವೀಕು- ಭವಿಷ್ಯ ಜಾಗ್ರತ್ತೆಯಾಗಿ ಹುಷಾರವಾಗಿ ಹೇಳಿ.."

ಉಡುಪಿಯ ಅಲಂಕಾರ್ ಟಾಕೀಸಿನ ಹತ್ತಿರದ ಲೈಬ್ರರಿಗೆ ನಡೆದೋಡುತ್ತಿದ್ದೆ! ದಾರಿ ಬದಿಯಲ್ಲಿ ಕೈ ಸನ್ನೆಯಿಂದ ಕರೆದವನನ್ನು ನೋಡಿದೆ. ಅವ ಭವಿಷ್ಯ ಹೇಳುವವ. ಅದೆಷ್ಟು ಬಾರಿ ಇಂತಹ ಸತ್ಯವಂತರನ್ನು ಕಂಡರೂ ಕಿವಿಗೊಡಲಿಲ್ಲ! ಕೇವಲ ಕಣ್ಣು (ಕೊಟ್ಟು!) ಮಿಟುಕಿಸಿ ನಗುತ್ತಾ ಬೈ ಬೈ ಹೇಳುತ್ತೇನೆ! ಆದರೆ ಈ ಬಾರಿ ಅವನೆದುರು ನಿಂತೆ.

'ದುಡ್ಡು ಬೇಡಾ ಸಾರ್ ಕುತ್ಕೊಳ್ಳಿ....' ಎಂದ ಅವ. ಕೂತೆ ನಾನು. ಹೇಗೂ ಲೈಬ್ರರಿಗೆ ಹೋಗಿ ಓದಿ ಮನೋರಂಜನೆ ಪಡೆಯಬೇಕೂಂತ ಇದ್ದೆ. ದುಡ್ಡು ಬೇಡವೆಂದಾಗ ಉಚಿತ ಮನೋರಂಜನೆ ಸಿಗಬಹುದೆಂದು ನನ್ನ ಯೋಚನೆ!

ಮೊದಲು ಆತ ನನ್ನ ಹೆಸರು ಕೇಳಿದ. ನಾನು 'ಸತ್ಯ' ಹೇಳಿದೆ. ಮುಂದೆ ಅವನ 'ಉಚಿತ' ಭವಿಷ್ಯವಾಣಿ ಶುರುವಾಗಬಹುದೆಂದು. ಆದರೆ ಅವನ ಮಾತು 'ಖಚಿತ'ವಾಗಿತ್ತು. ದುಡ್ಡು ಬೇಡಾ ಎಂದವ 'ಕಾಣಿಕೆ ಇಡಿ' ಎಂದು ಪುಸ್ತಕ ತೆರೆದ.

ನಾನು ಐದರ ನೋಟನ್ನು ಅದರಲ್ಲಿಟ್ಟೆ. ಇದು ಮನೋರಂಜನಾ ತೆರಿಗೆ ಎಂದು. (ಆಗಲೇ ನಾನು ಯೋಚಿಸಿದ್ದೆ ಇವನ ಬಗ್ಗೆ ಬರೆದು ಐದು ರೂಪಾಯಿಯ ಅಸಲನ್ನು ಹೇಗಾದರೂ ವಾಪಾಸು ಪಡೆಯಬೇಕೆಂದು!) ಆತನಿಗೆ ಐದು ಸಾಕಾಗಲಿಲ್ಲವೇನೋ?

'ಚಿಲ್ಲರೆ ಏನಾದರೂ ಇಡಿ' ಎಂದ. ಚಿಲ್ಲರೆ ಸಮಸ್ಯೆಯಿಂದ ಬೇಸತ್ತಿರುವ ಜನರ ಬಗ್ಗೆ ಅವನು ಅರಿತಿರಬೇಕು. ಮತ್ತೇನಾದರೂ ಇಡಲಿ ಎಂದು ಅವನ ಊಹೆ. ನಾನು ಕಿಸೆಯಲ್ಲಿ ಇಲ್ಲದ ಚಿಲ್ಲರೆಗಾಗಿ ಹುಡುಕಾಡಿದೆ. ನನ್ನ ಭವಿಷ್ಯ ಅವ ಹೇಳುತ್ತಾನೆ. ಅವನ ಭವಿಷ್ಯ ನಮ್ಮ ಕಾಣಿಕೆಯಲ್ಲಿದೆ. ನೋಟಿನ ಮೇಲಿನ ನೋಟದ ಆಧಾರದಲ್ಲಿ ಭವಿಷ್ಯದ ಸಾಲುಗಳು ನಿರ್ಧಾರ ಆಗುತ್ತವೆ! ನನ್ನ ಐದು ರೂಪಾಯಿಗೆ ಐದೇ ಸಾಲು !

ಮೊದಲ ವಾಕ್ಯ ಹೀಗಿತ್ತು.

'ನಿಮ್ಮ ಕೈಯಲ್ಲಿ ಹಣ ಉಳಿಯುವುದಿಲ್ಲ. ಅಲ್ಲವೇ?!' ಭವಿಷ್ಯದ ಜೊತೆಗೆ ಪ್ರಶ್ನೆಯು ಅದಾಗಿತ್ತು.

ಹಣ ಚಂಚಲ. ಲಕ್ಷ್ಮಿ 'ಹೆಚ್ಚಿನವರ' ಬಳಿ ನಿಲ್ಲುವುದಿಲ್ಲ. ಹಾಗಾಗಿ 'ಹೆಚ್ಚಿನವರ' ಪಾಲಿಗೆ ಈ ಮಾತು ನಿಜವಾಗುತ್ತದೆ ಎಂದು ಭವಿಷ್ಯಗಾರನಿಗೆ ಗೊತ್ತು. ಅವರಿಗದು ಮಾಮೂಲು. ನಾನು ಹೌದೆಂಬಂತೆ ತಲೆ ಆಡಿಸಿದೆ. ಅವ ನನ್ನನ್ನು ಆಡಿಸುತ್ತಾನೆಯೆ ಎಂದು ಕಾದು ನೋಡುತ್ತಿದ್ದೆ !

'ನಿಮಗೆ ವಾಹನ ಕೊಂಡ್ಕೊಳ್ಳುವ ಭಾಗ್ಯ ಇದೆ.... ಅಲ್ವಾ ಸಾರ್?' ಅವನಂದ. ನಾನು ಖುಷಿಯಾದವನಂತೆ ತಲೆ ಅಲ್ಲಾಡಿಸಿದೆ. ಇದು ಶುದ್ಧ ಮನೋರಂಜನೆಗಾಗಿ 'ಆಡಿದ' ಮಾತು ಎಂದನ್ನಿಸಿತ್ತು. ಹೀಗೊಂದು ವೇಳೆ ನಿಮಗ್ಯಾರಾದರು ಹೀಗೆಂದರೆಂದು ವಾಹನ ಕೊಂಡ್ಕೋಬೇಡಿ. ನಾನು ದುಬಾರಿ ಪೆಟ್ರೋಲ್ ಹಾಕಲಾರದೆ ವಾಹನ ಮಾರಿದವ. ವಾಹನ ಭಾಗ್ಯವಿದೆ ಎಂದದ್ದನ್ನು ಸಾಧಿಸಿ ತೃಪ್ತಿ ಪಡಬೇಕಾದಂತಾದರೆ ಸೈಕಲನ್ನು ಕೊಳ್ಳಿರಿ!

ಅವ ಮುಂದೆ ಹೇಳತೊಡಗಿದ. ಇದು ಮೂರನೇ ವಾಕ್ಯ! 'ನಿಮಗೆ ನಿಮ್ಮ ನೆರೆ ಹೊರೆಯವರು, ಸಂಬಂಧಿಕರು ಯಾರೂ ಸಹಾಯಕ್ಕೆ ಬರ್‍ತಾ ಇಲ್ಲ....' ಎಂದ ನನ್ನ ನಿರೀಕ್ಷೆ ಯಾವ ರೀತಿ ಇದೆ ಎಂದು ನನ್ನನ್ನು ನೋಡಿದ. ನಾನು ಹೌದೆಂಬಂತೆ ತಲೆ ಅಲ್ಲಾಡಿಸಿದೆ. ಇದು ಅವನ ಖುಷಿಗೋಸ್ಕರ! ಕೇವಲ

ನಾನೊಬ್ಬನೆ ಮನೋರಂಜನೆ ಪಡೆದರೆ ಸಾಲದು ಅವನಿಗೂ ಸ್ವಲ್ಪ ಖುಷಿಯಾಗಬೇಡವೆ? ಆದರೆ, ಒಂದಂತೂ ನನಗೆ ನಿಜ ಅನ್ನಿಸಿತ್ತು. ಅವನಿಗೆ ಸಂಬಂಧಿಕರು, ನೆರೆಹೊರೆಯವರು ನೆರವಿಗೆ ಬರುವುದಿಲ್ಲ. ನೆರವಿಗೆ ಬರುವವರೆಲ್ಲರೂ ಅಪರಿಚಿತರು! ಭವಿಷ್ಯ ಕೇಳುವ ನನ್ನಂಥವರು.

ಮುಂದೇನು ಹೇಳುತ್ತಾನೆಂಬ ಕುತೂಹಲ ನನ್ನಲ್ಲಿತ್ತು. ನನಗೂ ಟೈಂಪಾಸ್ ಆಗಬೇಕಲ್ವಾ? ಗೆಳೆಯರು ಕೆಲವು ಸಂದರ್ಭಗಳಲ್ಲಿ ಹರಟೆಗೆ ಸಿಗದಿದ್ದಾಗ ಸಿಕ್ಕ ಈತನೂ ಹತ್ತರ ಮಿತ್ರನಲ್ಲವೆ? ನಾನು ಖುಷಿಯಲ್ಲಿ ತೇಲುತ್ತಿದ್ದಾಗ.... ಅವನ ನಾಲ್ಕನೆ ಸಾಲು ಹೊರ ಬರಲು ಶುರುವಾಯ್ತು.

'ನಿಮಗೆ ಕೆಟ್ಟ ದೃಷ್ಟಿಯಾಗಿದೆ. ನಾನದನ್ನು ಮೂರು ದಿನದೊಳಗೆ ಸರಿ ಮಾಡುತ್ತೇನೆ ಅದಕ್ಕೆ ಐವತ್ತು ರೂಪಾಯಿ ಖರ್ಚಾಗುತ್ತದೆ.' ಅಚ್ಚರಿ ವ್ಯಕ್ತಪಡಿಸಿದೆ.

'ನನ್ನಲ್ಲೀಗ ಹಣ ಇಲ್ಲ' ಎಂದೆ.

'ಇನ್ನೊಂದು ದಿನ ಬನ್ನಿ. ನಾನು ಪರಿಹಾರ ಮಾಡುತ್ತೇನೆ' ಎಂದು ಶೇಕ್ ಹ್ಯಾಂಡ್ ಕೊಟ್ಟ. 'ಏಳು ಸಾಕು ನಿನ್ನ ಐದು ರೂಪಾಯಿಗೆ ಇಷ್ಟೇ ಮನೋರಂಜನೆ' ಎಂಬಂತೆ ಎಬ್ಬಿಸಲು ಪ್ರಯತ್ನಿಸಿದ. ಆದರೆ ನಾನು ಭವಿಷ್ಯಗಾರನಿಗೇ ಭವಿಷ್ಯದ ಬಗ್ಗೆ ನನ್ನ ಅಭಿಪ್ರಾಯ ತಿಳಿಸಬೇಕೆಂದು ನಿರ್ಧರಿಸಿ ಅಲ್ಲೇ ಗಟ್ಟಿ ಕೂತೆ!

'ನೀವು ಇದುವರೆಗೆ ಹೇಳಿದ್ದು (ಕೆಲವೆಲ್ಲ!) ಸರಿ.... ಆದರೆ ನಾನು ಭವಿಷ್ಯವನ್ನು ನಂಬುವುದಿಲ್ಲ, ನಿಮ್ಮನ್ನು ನಂಬುತ್ತೇನೆ....' ನನ್ನ ಪ್ರತಿ ಮಾತಿಂದ ಅವನಿಗೆ ನಿರಾಸೆಯಾಗಲಿಲ್ಲ. ಭವಿಷ್ಯ ಅವನೂ ನಂಬುವುದಿಲ್ಲವೇನೊ?!




'ನನಗೆ ದೃಷ್ಟಿಯಾಗಿದೆ ಎಂದ್ರಲ್ಲ ಆ ನನ್ನ ದೃಷ್ಟಿಯ ಪ್ರಕಾರ ಜೋತಿಷ್ಯವೆಂಬುವುದು ರೆಡಿಮೇಡ್ ಅಂಗಿಯಂತೆ!' ಎಂದೆ. ಅವನಿಗೆ ಖುಷಿಯಾಗಿರಬೇಕು.

'ಅದು ಅವರವರ ನಂಬಿಕೆ!' ಎಂದು ನಕ್ಕ. ಆದರೆ ಆ ನಗುವಿನಾಳದಲ್ಲಿ ಐವತ್ತು ರೂಪಾಯಿ ಬರುವುದು ತಪ್ಪಿರುವ ಬಗ್ಗೆ ವಿಷಾದವೂ ಇತ್ತು! ನಾನು ಹಣ ಕೊಡುವ ಆಸಾಮಿ ಅಲ್ಲವೆಂದು ಅವನಿಗೆ ಮೊದಲೇ ಅರಿವಿಗೆ ಬರುತ್ತಿದ್ದರೆ ಆತ ನನ್ನನ್ನು ಕರೆದು ಕೂರಿಸುತ್ತಿದ್ದನೆ?' ಇಷ್ಟು ಸಾಕಾಗದೆ ಅವನ ಭವಿಷ್ಯದ ಶಕ್ತಿಯನ್ನು ತೂಕ ಮಾಡಲು.

ಏನೇ ಆಗಲಿ ನಮ್ಮಿಬ್ಬರಲ್ಲಿ ಒಳ್ಳೆಯ ಸ್ನೇಹ ಬೆಳೆಯಿತು. 'ನಿಜ ಹೇಳುತ್ತೇವೆ ನಾನಿಲ್ಲ ಕೂತದ್ದು ಭವಿಷ್ಯ ಕೇಳಲಿಕ್ಕಲ್ಲ. ಲೈಬ್ರರಿಗೆಂದು ಬಂದವ. ಅಲ್ಲಿ ಓದುವುದಕ್ಕಿಂತ ನಿಮ್ಮ ಮಾತು ಆಲಿಸುವುದು ಸುಲಭವಲ್ಲವೇ? ಹಾಗಾಗಿ ನಿಮ್ಮೆದುರು ಕೂತೆ! (ಇಲ್ಲದಿದ್ದರೆ ನಾನೊಬ್ಬನೇ ಕೂತು ಭವಿಷ್ಯದ ಬಗ್ಗೆ ಯೋಚಿಸುತ್ತೇನೆ!) ಪರ್ವಾಗಿಲ್ಲ ಒಳ್ಳೆಯದಾಗಿ ಟೈಮ್ ಪಾಸಾಯಿತು.... ನಾನಿನ್ನು ಬರ್ಲಾ....!' ಎಂದು ನಗುತ್ತಾ ಎದ್ದೆ.

'ನಿಮಗೆ ಒಳ್ಳೆಯದಾಗಲಿ' ಎಂದು ಆತನೂ ನಕ್ಕ.

'ನಿಮಗೂ ಒಳ್ಳೆಯದಾಗಲಿ' ಎಂದು ಅಲ್ಲಿಂದ ಜಾಗ ಖಾಲಿ ಮಾಡಿದೆ. ಈ ದುಬಾರಿ ಕಾಲದಲ್ಲಿ ಇಷ್ಟು ಮನೋರಂಜನೆ ಸಾಕು. ಅದು ಕೇವಲ ಐದು ರೂಪಾಯಿಗೆ! ಎಂದು ಮನದೊಳಗೆ ನಗತೊಡಗಿದೆ. ■

---

## ರಸ್ತೆ ರಾಣಿ!

ಬೆಂಗಳೂರಿನ ಲಾರಿ ಮಾಲೀಕರೊಬ್ಬರು ಬನಶಂಕರಿಯ ಭಕ್ತರು. ಎಲ್ಲ ಲಾರಿಗಳೂ ಮೇಲೂ 'ಬನಶಂಕರಿ' ಎಂಬ ದೊಡ್ಡ ಬರಹ ಇರುತ್ತದೆ. ಹಾಗೆ ಮುಂದಿನ ಬಂಪರ್ ಮೇಲೆ ಡ್ರೈವರ್‌ಗಳು 'ರಸ್ತೆ ರಾಜ' ಎಂದು ಬರೆಸಿರುತ್ತಾರೆ. ಹೆಣ್ಣು ಲಾರಿ, ರಸ್ತೆಗಿಳಿದಾಗ ರಾಜ ಆಗುವುದೇ ಸೋಜಿಗ ಅಲ್ಲವೇ?

## ನಂಬಬೇಡಿ

ಬೆಂಗಳೂರು ಆಟೋಗಳ ಬೆನ್ನ ಮೇಲೆ ನಾನಾ ಬರಹಗಳಿರುತ್ತವೆ. ಅಂಥ ಒಂದು ಬರಹ
'ವಿಷ ಇರುವ ಸರ್ಪವನ್ನು ಬೇಕಾದರೆ ನಂಬು, ಹೆಣ್ಣನ್ನು ಮಾತ್ರ ನಂಬಬೇಡ'
ಅದ್ಯಾವ ಹೆಣ್ಣು ಅವನಿಗೆ ಕೈಕೊಟ್ಟದ್ದಳೋ!

## ಕ್ವಿಕ್ ಫಿಕ್ಸ್

ಕ್ವಿಕ್ ಫಿಕ್ಸ್ ಎಂಬ ಅಂಟಿನ ಪಾಕೆಟ್ ಮೇಲೆ ಮುದ್ರಿಸಿರುವ ಘೋಷಣೆ.
'ಮುರಿದ ಹೃದಯಗಳನ್ನು ಬಿಟ್ಟು ಬೇರೆ ಎಲ್ಲವನ್ನೂ ಇದು ಒಂದುಗೂಡಿಸಬಲ್ಲದು'

# ಟ್ರಾಫಿಕ್ ಜಾಮ್

## ಪರಿಹಾರವೇನು?



**ಬೆಂಗಳೂರಂಥ ನಗರದಲ್ಲಿ ಹತ್ತಿರ, ದೂರ ಎನ್ನುವುದಕ್ಕಿಂತ ಪ್ರಯಾಣದ ಮಾರ್ಗ ಎಷ್ಟೆಲ್ಲಾ ರೀತಿಯಲ್ಲಿ ಸಂಚಾರಕ್ಕೆ ತೊಂದರೆ ಉಂಟು ಮಾಡುವಂತೆ ಇರಲು ಸಾಧ್ಯವೋ? ಹಾಗೆಲ್ಲಾ ಇದೆ. ಇಂಥ ಸ್ಥಿತಿಯಲ್ಲಿ ವಾಹನಗಳನ್ನು ನೆಚ್ಚಿ ಕೆಲಸದ ತಾಣಕ್ಕೋ, ಶಾಲೆಗೋ, ಅಗತ್ಯ ವಸ್ತುಗಳ ಖರೀದಿಗೋ ಹೊರಟವರು ಅನಗತ್ಯ ಕಾಲ ವ್ಯಯಕ್ಕೆ ಗುರಿಯಾಗುತ್ತಾರೆ. ಸರಿಯಾದ ಕಾಲಕ್ಕೆ ತಲುಪಲಾಗದ ಉದ್ವಿಗ್ನತೆ, ಅದರಿಂದಾಗಿ ಉದ್ಭವಿಸಬಹುದಾದ ಸಮಸ್ಯೆಗಳಿಂದಲೇ ಜನ ಮಾನಸಿಕವಾಗಿ ಬಳಲುತ್ತಾರೆ. ದೇಹ ಶ್ರಮಕ್ಕಿಂತ ಹೆಚ್ಚಾಗಿ ಇಂಥ ಸಮಸ್ಯೆಗಳು ಮನುಷ್ಯನನ್ನು ದಣಿಸುತ್ತವೆ.**

ನಮ್ಮ ಮನೆಯಿಂದ ಆಫೀಸಿಗೆ ಸುಮಾರು ಎಂಟು ಕಿಲೋಮೀಟರ್. ರಸ್ತೆಯಲ್ಲಿ ಐದು ಸಿಗ್ನಲ್‌ಗಳನ್ನು ಹಾಯಬೇಕು. ಮೂರು ಕಡೆ ಇಕ್ಕಟ್ಟು ರಸ್ತೆಯಲ್ಲಿ ನಿಧಾನವಾಗಿ ಸಾಗಬೇಕು. ಬೆಳಗಿನ ಎಂಟು ಗಂಟೆಗೆ ಮುಂಚೆ ಹೊರಟರೆ ಹದಿನೈದರಿಂದ ಇಪ್ಪತ್ತು ನಿಮಿಷದಲ್ಲಿ ನಾನು ಹತ್ತುವ ಸಿಟಿ ಬಸ್ ಗುರಿ ಮುಟ್ಟುತ್ತದೆ. ಒಂಬತ್ತು ಗಂಟೆ ದಾಟಿದ ಮೇಲೆ ಅವಧಿ ಕನಿಷ್ಠ ಮೂವತ್ತರಿಂದ ನಲವತ್ತು ನಿಮಿಷ ಆಗುತ್ತದೆ.

ಇದಕ್ಕಿಂತ ಕೊಂಚ ಹತ್ತಿರದ ಹಾದಿ ಇದೆ. ಅಲ್ಲಿ ಕೇವಲ ಮೂರು ಸಿಗ್ನಲ್‌ಗಳನ್ನು ಹಾಯ್ದು ಹೋಗಬೇಕು. ಆದರೆ ಈ ರಸ್ತೆಯಾಗಿ ಹೋದರೆ ಆಫೀಸಿಗೆ ಮುಟ್ಟಲು ಕನಿಷ್ಠ ಒಂದು ತಾಸು ಬೇಕು. ಕೆಲವೊಮ್ಮೆ ಪೀಕ್ ಅವರ್‌ಗಳಲ್ಲಿ ಎರಡು ಮೂರು ತಾಸಾದರೂ ಆಶ್ಚರ್ಯ ಏನಿಲ್ಲ. ಈ ಹಾದಿಯಲ್ಲಿ ಬರುವ 'ಮೇಖ್ರಿ ಸರ್ಕಲ್' ಎಂಬ ವೃತ್ತದಲ್ಲಿ ಸಿಗ್ನಲ್ ಸಿಕ್ಕಿ ಮುಂದೆ ಹೋದರೆ ಏನೋ ದೊಡ್ಡ ಸಾಧನೆ ಮಾಡಿದವರಂತೆ ವಾಹನ ಚಾಲಕರು ಸಮಾಧಾನದ ನಿಟ್ಟುಸಿರು ಬಿಡುತ್ತಾರೆ. ಅದರಿಂದ ಮುಂದೆ ಕಂಟೋನ್ಮೆಂಟ್ ರೈಲು ನಿಲ್ದಾಣದ ಬಳಿ ಒಂದು ಸಣ್ಣ ಅಂಡರ್ ಬ್ರಿಜ್ ಬರುತ್ತದೆ. ಕೆಲವೊಮ್ಮೆ ಅಲ್ಲಿ ವಾಹನಗಳು ಸಿಕ್ಕಿ ಹಾಕಿಕೊಂಡರೆ ಅರ್ಧ ದಿನ ಗ್ಯಾರಂಟಿ ಅಲ್ಲಿ ವೇಸ್ಟ್ ಆಗುತ್ತದೆ.

ಬೆಂಗಳೂರಂಥ ನಗರದಲ್ಲಿ ಹತ್ತಿರ, ದೂರ ಎನ್ನುವುದಕ್ಕಿಂತ ಪ್ರಯಾಣದ ಮಾರ್ಗ ಹೇಗೆಲ್ಲ ಇರುತ್ತದೆ ಎಂಬುದಕ್ಕೆ ಇದೊಂದು ಸಣ್ಣ ಉದಾಹರಣೆ. ಇಂಥ ಸ್ಥಿತಿಯಲ್ಲಿ ವಾಹನಗಳನ್ನು ನೆಚ್ಚಿ ಕೆಲಸದ ತಾಣಕ್ಕೋ, ಶಾಲೆಗೋ, ಅಗತ್ಯ ವಸ್ತುಗಳ ಖರೀದಿಗೋ ಹೊರಟವರು ಅನಗತ್ಯ ಕಾಲ ವ್ಯಯಕ್ಕೆ ಗುರಿಯಾಗುತ್ತಾರೆ. ಸರಿಯಾದ ಕಾಲಕ್ಕೆ ತಲುಪಲಾಗದ ಉದ್ವಿಗ್ನತೆ, ಅದರಿಂದಾಗಿ ಉದ್ಭವಿಸಬಹುದಾದ ಸಮಸ್ಯೆಗಳಿಂದಲೇ ಜನ ಮಾನಸಿಕವಾಗಿ ಬಳಲುತ್ತಾರೆ. ದೇಹ ಶ್ರಮಕ್ಕಿಂತ ಹೆಚ್ಚಾಗಿ ಇಂಥ ಸಮಸ್ಯೆಗಳು ಮನುಷ್ಯನನ್ನು ದಣಿಸುತ್ತವೆ.

ಇಂಥ ಸಮಸ್ಯೆಗಳು ಆಧುನಿಕ ಜೀವನದ, ಅದರಲ್ಲೂ ನಗರ ಜೀವನದ ಒಂದು ಭಾಗ. ಈ ಹೊತ್ತು ನಗರ ಒಂದರ ಶೇಕಡಾ 30 ರಿಂದ 50 ರಷ್ಟು ಜನ ತಮ್ಮ ಕೆಲಸಗಳಿಗಾಗಿ, ಶೇಕಡಾ 30 ರಿಂದ 40 ರಷ್ಟು ಜನ ಶಾಲೆ ಕಾಲೇಜುಗಳಿಗೆ ತೆರಳಲು ವಾಹನಗಳನ್ನು ಆಶ್ರಯಿಸುತ್ತಾರೆ.

ಮನುಷ್ಯ ಒಂದೆಡೆಯಿಂದ ಒಂದೆಡೆಗೆ ಸಂಚರಿಸಲು ಇವತ್ತು ಹದಿನೆಂಟು ಬಗೆಯ ಸಂಚಾರ ಸೌಲಭ್ಯಗಳು ಲಭ್ಯವಿದೆ. ಇವುಗಳಲ್ಲಿ ಬಸ್ ಮುಖ್ಯವಾದದ್ದು. ಒಂದು ಕಾಲಕ್ಕೆ ಎಂಥ ಬೃಹತ್ ನಗರವಾದರೂ ಕೆಲಸದ ಜಾಗ ಅಥವಾ ಶಾಲಾ ಕಾಲೇಜುಗಳನ್ನು ತಲುಪಲು 4 ರಿಂದ 7 ಕಿ.ಮೀ ಕ್ರಮಿಸಿದರೆ ಸಾಕಿತ್ತು. ಈ ಹೊತ್ತು ಮನೆಯಿಂದ ಕೆಲಸದ ಜಾಗಕ್ಕೆ ಹೋಗಲು ಕೆಲವೊಮ್ಮೆ 40 ರಿಂದ 50 ಕಿ.ಮೀ ಕ್ರಮಿಸಬೇಕಾದ ಪರಿಸ್ಥಿತಿ ಇದೆ. ಮುಂಬಯಿಯಂಥ ನಗರಗಳಿಗೆ ದೂರದ ಕಲ್ಯಾಣ್, ದೊಂಬಿವಿಲಿ ಮುಂತಾದೆಡೆಗಳಿಂದ ಜನ ಬರುವ ಹಾಗೇ ಬೆಂಗಳೂರಿನಂಥ ನಗರಗಳಿಗೆ ತುಮಕೂರು, ಕೋಲಾರ, ಹೊಸೂರುಗಳಿಂದ ಬರುವ ಹಾಗೆ ದಿನನಿತ್ಯ ಮೈಸೂರಿನಿಂದ ಪ್ರಯಾಣಿಸುವವರೂ ಇದ್ದಾರೆ.

ಈ ಎಲ್ಲ ಪ್ರಯಾಣಿಕರ ಸಂಖ್ಯೆಯ ಏರಿಕೆಯಿಂದಾಗಿ, ವಾಹನಗಳ ಸಂಖ್ಯೆಯೂ ಏರಿದೆ. 1951ರಲ್ಲಿ ಇಡೀ ಇಂಡಿಯಾದಲ್ಲಿ 27 ಸಾವಿರ ದ್ವಿಚಕ್ರ

ವಾಹನಗಳು, 1.5 ಲಕ್ಷ ಕಾರುಗಳು, 34 ಲಕ್ಷ ಬಸ್‌ಗಳು. 86 ಲಕ್ಷ ಇತರ ವಾಹನಗಳು ಇದ್ದವು. 2000ದ ಹೊತ್ತಿಗೆ 346 ಲಕ್ಷ ದ್ವಿಚಕ್ರ ವಾಹನಗಳು, 33 ಲಕ್ಷ ಕಾರುಗಳು, 55 ಲಕ್ಷ ಬಸ್‌ಗಳು ಹಾಗೂ 385 ಲಕ್ಷ ಇತರ ವಾಹನಗಳು ರಸ್ತೆಗೆ ಇಳಿದಿವೆ.

ಐವತ್ತು ವರ್ಷಗಳಲ್ಲಿ ದ್ವಿಚಕ್ರ ವಾಹನಗಳ ಸಂಖ್ಯೆ ಮಿತಿ ಮೀರಿ ಏರಿದೆ. ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ಸರ್ಕಾರಗಳು ಸರಿಯಾಗಿ ಒದಗಿಸದೇ ಇರುವುದೇ ಇದಕ್ಕೆ ಮುಖ್ಯ ಕಾರಣ.

ಈಗಾಗಲೇ ಭಾರತದ ಜನಸಂಖ್ಯೆ ನೂರು ಕೋಟಿ ದಾಟಿದೆ. ಜನಸಂಖ್ಯೆ ಏರಿಕೆ, ಮರಣ ಪ್ರಮಾಣದ ಇಳಿಕೆ ನಾನಾ ಸಮಸ್ಯೆಗೆ ಕಾರಣ. ನಮ್ಮಲ್ಲಿ ಬೆಳೆಯುತ್ತಿರುವ ಜನಸಂಖ್ಯೆ ಗಮನದಲ್ಲಿ ಇಟ್ಟುಕೊಂಡು ನೀರು, ವಸತಿ, ಟೆಲಿಫೋನ್ ಸಂಪರ್ಕ ಮುಂತಾದುವನ್ನು ಒದಗಿಸಲು ಯೋಜನೆಗಳು ಸಿದ್ಧವಾಗುತ್ತವೆ. ಆದರೆ ಹೀಗೆ ಏರುತ್ತಿರುವ ಜನಸಂಖ್ಯೆಗೆ ಅಗತ್ಯವಾಗಿರುವ ರಸ್ತೆ, ಸಾರಿಗೆ ಸಂಪರ್ಕ ಕಲ್ಪಿಸುವ ವಿಚಾರವನ್ನು ಇಂಥ ಯೋಜನೆಗಳಲ್ಲಿ ಸೇರಿಸುವುದೇ ಇಲ್ಲ.

ಸಂಚಾರ ವ್ಯವಸ್ಥೆ ಇವತ್ತು ನಗರಗಳ ಬಹು ಮುಖ್ಯ ಸಮಸ್ಯೆ. ಹಳ್ಳಿ, ಸಣ್ಣ ಪಟ್ಟಣ ಮುಂತಾದವುಗಳಿಗೂ ಸಾರಿಗೆ ವ್ಯವಸ್ಥೆ ಬೇಕು ನಿಜ. ಆದರೆ ನಗರಗಳಲ್ಲಿ ದಿನದಿಂದ ದಿನಕ್ಕೆ ಸಾರಿಗೆ ಸಮಸ್ಯೆ ಉಲ್ಬಣಿಸುತ್ತಾ ಇದೆ ಎಂಬುದಂತೂ ನಿಜ. 1950ರ ಸುಮಾರಿಗೆ ಹತ್ತು ಲಕ್ಷ ಜನಸಂಖ್ಯೆ ಮೀರಿದ ಪಟ್ಟಣಗಳ ಸಂಖ್ಯೆ ಕೇವಲ ನಾಲ್ಕು ಮಾತ್ರ. 1980ರ ಹೊತ್ತಿಗೆ ಇಂಥ ಪಟ್ಟಣಗಳ ಸಂಖ್ಯೆ 12ಕ್ಕೆ ಏರಿದರೆ, 1990ರಲ್ಲಿ ಅಂಥ ಪಟ್ಟಣಗಳ ಸಂಖ್ಯೆ 23ಕ್ಕೆ ಏರಿಬಿಟ್ಟಿತು. ಮುಂದಿನ ವರ್ಷದ ಹೊತ್ತಿಗೆ ಹತ್ತು ಲಕ್ಷ ಜನಸಂಖ್ಯೆ ಮೀರಿದ 40 ಪಟ್ಟಣಗಳು ಭಾರತದಲ್ಲಿ ಇರುತ್ತವೆ. ಇದಲ್ಲದೆ ಒಂದರಿಂದ ಹತ್ತು ಲಕ್ಷ ಜನಸಂಖ್ಯೆವರೆಗಿನ 440 ಪಟ್ಟಣಗಳು ಇರುತ್ತವೆ. ಇಂಥ ಬೆಳವಣಿಗೆ ಗುರುತಿಸಿ, ನಗರಗಳ ಅಗತ್ಯಗಳೇನೆಂದು ಅರಿತು ಸಲಹೆ, ಸೂಚನೆಗಳನ್ನು ನೀಡಲು ರಾಷ್ಟ್ರೀಯ ನಗರೀಕರಣ ಆಯೋಗ ಎಂಬುದಿದೆ. ಈ ಆಯೋಗ ಬೇರೆಲ್ಲ ನಗರೀಕರಣದ ಸಮಸ್ಯೆಗಳಿಗೆ ಆದ್ಯತೆ ನೀಡಿ ಚರ್ಚಿಸುತ್ತಾ ಬಂದಿದೆಯಾದರೂ, ಸಂಚಾರ ಸಮಸ್ಯೆ ಬಗ್ಗೆ ಯಾವತ್ತೂ ತಲೆ ಕೆಡಿಸಿಕೊಂಡೇ ಇಲ್ಲ.

### ನಡು ರಸ್ತೆಯಲ್ಲಿ ನಡೆದೀರ!

ಫುಟ್‌ಪಾತ್‌ಗಳೇ ವಿರಳವಾಗುತ್ತಿರುವ ಇಂದಿನ ದಿನಗಳಲ್ಲಿ ಪಾದಚಾರಿಗಳು ರಸ್ತೆಗಿಳಿಯುವುದು ಸಾಮಾನ್ಯ. ಆದರೆ ನಡುರಸ್ತೆಯಲ್ಲೇ ಆರಾಮವಾಗಿ ನಡೆಯುವುದೇ ಈಗ ಅಪರಾಧ.

ಬೆಂಗಳೂರಿನ ಮಹಾತ್ಮಾ ಗಾಂಧಿ ರಸ್ತೆ ಹಾಗೂ ಬ್ರಿಗೇಡ್ ರಸ್ತೆಗಳಲ್ಲಿ ಹೀಗೆ ಅಡ್ಡಾಡಿಗಳಾಗಿ ಸಂಚರಿಸುವ ವ್ಯಕ್ತಿಗಳನ್ನು ಹಿಡಿದು ದಂಡ ವಿಧಿಸುವ ಕೆಲಸ ಆರಂಭವಾಗಿದೆ.

ಮೊದಲ ಸಲ ಹೀಗೆ ಸಿಕ್ಕಿಬಿದ್ದರೆ ದಂಡ ಐವತ್ತು ರೂಪಾಯಿ.

ಬೆಂಗಳೂರು, ಚೆನ್ನೈ, ದೆಹಲಿಯಂಥ ನಗರಗಳಲ್ಲಿ ಒಟ್ಟಾರೆ ವಾಹನಗಳಲ್ಲಿ ಶೇಕಡಾ 60 ರಿಂದ 70 ರಷ್ಟು ದ್ವಿಚಕ್ರ ವಾಹನಗಳೇ ಇರುತ್ತವೆ. ಇವುಗಳಿಗಾಗಿ ಇರುವ ಬೇಡಿಕೆ ಕಡಿಮೆ ಆಗುವ ಲಕ್ಷಣವೂ ಕಾಣುತ್ತಿಲ್ಲ. ಬದಲಿಗೆ ಇನ್ನೂ ಹೆಚ್ಚಾದರೆ ಆಶ್ಚರ್ಯ ಪಡಬೇಕಿಲ್ಲ. ಇದೇ ವೇಳೆ ನಗರಗಳ ರಸ್ತೆಗಳು ಹಾಗೇ ಇವೆ. ಹೊಸ ರಸ್ತೆಗಳಾಗಿಲ್ಲ. ಇದ್ದ ರಸ್ತೆಗಳು ಅಗಲಗೊಂಡಿಲ್ಲ. ಅಥವಾ ಅವುಗಳನ್ನು ವಿಸ್ತರಿಸಿಲ್ಲ. ಹೀಗಾಗಿ ರಸ್ತೆಯ ಬಹುಭಾಗವನ್ನು ಈ ದ್ವಿಚಕ್ರ ವಾಹನಗಳು ಆಕ್ರಮಿಸಿಕೊಳ್ಳುತ್ತಾ ಇವೆ.

ಏರುತ್ತಾ ಇರುವ ಮಧ್ಯಮ ವರ್ಗದ ಕೊಳ್ಳುವ ಶಕ್ತಿ ಇಂಥ ಬೆಳವಣಿಗೆ ಕಾರಣ ಎಂಬುದು ನಿಜವಾದರೂ, ಆಯಾ ರಾಜ್ಯ ಸರ್ಕಾರಗಳು ಸೂಕ್ತ ಸಾರ್ವಜನಿಕ ಸಾರಿಗೆ ವ್ಯವಸ್ಥೆ ಮಾಡದೇ ಇರುವುದರಿಂದಲೇ ಇಂಥ ಖಾಸಗಿ ವಾಹನಗಳ ಸಂಖ್ಯೆ ಜಾಸ್ತಿ ಆಗುತ್ತಾ ಇದೆ ಎಂಬುದಂತೂ ಸತ್ಯ.

ಈಗಾಗಲೇ ರಾಷ್ಟ್ರ ಬಳಸುವ ಒಟ್ಟಾರೆ ಇಂಧನದಲ್ಲಿ ಶೇಕಡಾ 30 ರಿಂದ 40 ರಷ್ಟನ್ನು ನಗರಗಳ ಇಂಥ ಸಾರಿಗೆ ವಾಹನಗಳೇ ಕಬಳಿಸುತ್ತಾ ಇವೆ. ಸಂಚಾರ ವ್ಯವಸ್ಥೆ ಸುಗಮವಾಗಿಲ್ಲದ ಕಾರಣ 1,350 ಕೋಟಿ ರೂ. ಬೆಲೆಯ ಇಂಧನ ನಗರಗಳಲ್ಲಿ ಪ್ರತಿ ವರ್ಷ ಪೋಲಾಗುತ್ತಾ ಇದೆ.

ಮುಂಬಯಿ, ಚೆನ್ನೈ ಮತ್ತು ಕಲ್ಕತ್ತಾ ನಗರಗಳಲ್ಲಿ ವಿದ್ಯುತ್ ಟ್ರೈನ್‌ಗಳ ನಿರ್ವಹಣೆ ಇದೆಯಾದರೂ, ಅದೂ ಕೂಡ ಸಾಲದಷ್ಟು ಮಿತಿ ಮೀರಿದ ಜನಸಂಖ್ಯೆಯಿಂದಾಗಿ, ಖಾಸಗಿ ವಾಹನಗಳು ಅಗತ್ಯ ಸಾಧನಗಳಾಗುತ್ತಾ ಇರುವುದು ಗಮನಾರ್ಹ. ಸಾರಿಗೆ ಬಸ್, ರೈಲುಗಳಲ್ಲದೇ ಬೃಹತ್ ನಗರಗಳಲ್ಲಿ





ಕಾರುಗಳ ಮಾರಾಟಕ್ಕೆ ತೀವ್ರ ಪೈಪೋಟಿ

ರಿಕ್ಷಾ ಮತ್ತು ಟ್ಯಾಕ್ಸಿಗಳನ್ನು ಭಾರೀ ಪ್ರಮಾಣದಲ್ಲಿ ಬಳಸಲಾಗುತ್ತದೆ. ಮುಂಬಯಿ ನಗರದ ಕೇಂದ್ರ ಭಾಗದಲ್ಲಿ ರಿಕ್ಷಾಗಳ ಸಂಚಾರಕ್ಕೆ ನಿರ್ಬಂಧ ಇದೆಯಾದರೂ ಉಳಿದೆಡೆ ಇಂಥ ನಿರ್ಬಂಧ ಜಾರಿಗೆ ತರುವುದು ಸಾಧ್ಯವೇ ಇಲ್ಲದಂಥ ಸ್ಥಿತಿ.

ವಾಹನಗಳ ದಟ್ಟಣೆಯಿಂದಾಗಿ ಅಪಘಾತಗಳ ಸಂಖ್ಯೆಯೂ ಹೆಚ್ಚುತ್ತಿದೆ. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಸಾವಿರ ವಾಹನಗಳಿಗೆ ಸರಾಸರಿ ಎಂಟು ಅಪಘಾತಗಳಾದರೆ ಇಲ್ಲಿ ಹದಿನೈದು ಅಪಘಾತ ಜರುಗುತ್ತವೆ.

ಈ ರೀತಿಯ ಅಪಘಾತಗಳಿಂದಾಗಿ ನೇರವಾಗಿ ಆಗುವ ಹಾನಿ, ಆಸ್ಪತ್ರೆ ಖರ್ಚು, ಗಾಯಗೊಂಡು ಆಸ್ಪತ್ರೆ ಸೇರುವುದರಿಂದ ಕೆಲಸ ಮಾಡಲಾಗದೇ ಆಗುವ ನಷ್ಟ ಎಲ್ಲ ಲೆಕ್ಕ ಹಾಕಿದರೆ ವರ್ಷಕ್ಕೆ ಮೂರು ಸಾವಿರ ಕೋಟಿ ರೂಪಾಯಿಗೂ ಹೆಚ್ಚು ದೇಶದಲ್ಲಿ ನಷ್ಟ ಆಗುತ್ತಿದೆ.

ಇದಕ್ಕಿಂತ ಹೆಚ್ಚಾಗಿ ಅಪಘಾತಗಳು ಸಂಭವಿಸಿದಾಗ ಸಾವಿಗೀಡಾಗುವವರಲ್ಲಿ ಹೆಚ್ಚಾಗಿ ದುಡಿಯುವ ವಯೋಮಾನದವರು ಇರುತ್ತಾರೆ. ಒಟ್ಟಾರೆ ಅಪಘಾತಗಳಲ್ಲಿ ಹೀಗೆ ಮಡಿಯುವವರ ಸಂಖ್ಯೆ ಶೇಕಡಾ 10 ಎಂದು ಲೆಕ್ಕ ಮಾಡಿಬಿಡುವುದು ಸುಲಭ.

ದುಡಿಯುವ ವಯೋಮಾನದ ವ್ಯಕ್ತಿಯೊಬ್ಬನ ನಿಧನದಿಂದ ಆಯಾ ಕುಟುಂಬಗಳಿಗಾಗುವ ಆಘಾತ, ಆರ್ಥಿಕ ಏರುಪೇರು ಲೆಕ್ಕ ಹಾಕಿದರೆ ಅದೇ ಒಂದು ದೊಡ್ಡ ಕಥೆಯಾಗುತ್ತದೆ. ಮುಂದುವರೆದ ಬ್ರಿಟನ್‌ನಂಥ ದೇಶದಲ್ಲಿ ಒಟ್ಟಾರೆ ರಾಷ್ಟ್ರೀಯ ಉತ್ಪನ್ನದ ಶೇಕಡಾ ಒಂದರಷ್ಟು ಹಣ ಅಪಘಾತ ತಡೆ ಹಾಗೂ ಅಪಘಾತ ನಂತರದ ಪರಿಹಾರಗಳಿಗೇ ಮೀಸಲಿಡಲಾಗಿದೆ. ನಮ್ಮಲ್ಲಿ ಅಂಥ ವ್ಯವಸ್ಥೆ ಏನೂ ಇದ್ದ ಹಾಗೆ ಕಾಣದು.

### ಅಧ್ಯಯನದ ಕೊರತೆ

ನಮ್ಮಲ್ಲಿ ದಿನಾ ಎಷ್ಟು ಜನ ಪ್ರಯಾಣಿಸುತ್ತಾರೆ? ಅದಕ್ಕೆ ಕಾರಣಗಳೇನು? ಅವರು ಬಳಸುವ ಸಾಧನಗಳೇನು? ಯಾವ ರೀತಿಯ ಪ್ರಯಾಣ ಅವರಿಗೆ ಸೂಕ್ತ? ಎಂಬ ಯಾವೊಂದು ಮಾಹಿತಿಯೂ ನಮ್ಮಲ್ಲಿ ಲಭ್ಯವಿಲ್ಲ. ಇಂಥ ಮಾಹಿತಿ ಬೇಕು ಎಂದು ಕೂಡ ಯಾರಿಗೂ ಅನ್ನಿಸುವುದೇ ಇಲ್ಲ. ಒಂದು ರಸ್ತೆಯಲ್ಲಿ ವಾಹನಗಳ ಸಂಚಾರ ದಟ್ಟವಾದರೆ ಅದನ್ನು 'ಒನ್ ವೇ' ಮಾಡಿ ಪರಿಹಾರ ಎಂದುಕೊಂಡು ಸುಮ್ಮನಾಗುತ್ತಾರೆ.

ಪ್ರತಿಯೊಂದು ಪ್ರದೇಶದ ಸಂಚಾರ ವ್ಯವಸ್ಥೆಯಲ್ಲೂ ಅಲ್ಲಲ್ಲಿನದೇ ವಿಚಿತ್ರ ಸಮಸ್ಯೆಗಳಿರುತ್ತವೆ. ಇಂಥ ಸಮಸ್ಯೆಗಳ ನಿರ್ವಹಣೆಗೆ ಪ್ರಾದೇಶಿಕ ಸಾರಿಗೆ ವ್ಯವಸ್ಥೆ ನಿರ್ವಹಣೆಗೆ ಸೂಕ್ತ ಅಧ್ಯಯನ ಆಗಬೇಕು. ಇರುವ ಸೌಲಭ್ಯಗಳನ್ನು ಬಳಸಿಕೊಂಡು ವಾಹನಗಳು ಸುಗಮವಾಗಿ ಚಲಿಸುವಂತಾಗಲು ಉಪಾಯಗಳನ್ನು ಕಂಡು ಹಿಡಿಯಬೇಕು. ಹೆಚ್ಚು ಜನರನ್ನು ಕೊಂಡೊಯ್ಯಬಲ್ಲ ವಾಹನಗಳ ಬಳಕೆಗೆ ಆದ್ಯತೆ ನೀಡಬೇಕು. ಇದರಿಂದಾಗಿ ಸಂಚಾರ ದಟ್ಟಣೆ ಅಧಿಕವಾಗಿರುವ ಬೆಳಿಗ್ಗೆ ಮತ್ತು ಸಂಜೆಯ 'ಪೀಕ್ ಅವರ್' ಸಮಸ್ಯೆ ನೀಗಿಸಬಹುದು.

ಇದಲ್ಲದೇ ಕಾರು, ದ್ವಿಚಕ್ರ ವಾಹನಗಳನ್ನು ಬಳಸುವವರು ಒಬ್ಬೊಬ್ಬರೇ ಪ್ರಯಾಣಿಸುವ ಬದಲು ಕಾರುಗಳಲ್ಲಿ ನಾಲ್ಕರಿಂದ ಐದು ಜನ, ದ್ವಿ ಚಕ್ರ ವಾಹನಗಳಲ್ಲಿ ಇಬ್ಬರು ಪ್ರಯಾಣಿಸುವ ಬಗ್ಗೆಯೂ ಒತ್ತು ನೀಡಬಹುದು.

ಇದೆಲ್ಲಕ್ಕೂ ಪೂರಕವಾಗಬಹುದಾದ ಮಾಹಿತಿ ಸಂಗ್ರಹ ಮತ್ತು ಅಧ್ಯಯನ ತುರ್ತಾಗಿ ಆಗಬೇಕಿದೆ.

### ಪರ್ಯಾಯ ವ್ಯವಸ್ಥೆ

ಜಪಾನ್‌ನಂಥ ದೇಶದಲ್ಲಿ ಸಂಚಾರ ಬಹುದೊಡ್ಡ ಸಮಸ್ಯೆ ಆಗಿದೆ. ರಾಜಧಾನಿ ಟೋಕಿಯೋದ ಉಪನಗರ, ಹತ್ತಿರದ ಜಿಲ್ಲೆಗಳಿಂದ ಬರುವ ಜನರ ಸಂಖ್ಯೆಯೇ ಲಕ್ಷಾಂತರ. ಅಂಥ ಎಲ್ಲರೂ ತಮ್ಮ ಮನೆಗೆ ಸಮೀಪದ ಬಸ್ ನಿಲ್ದಾಣದ ಅಥವಾ ರೈಲು ನಿಲ್ದಾಣದವರೆಗೆ ಸ್ವಂತ ವಾಹನದಲ್ಲಿ ಬಂದು, ಅಲ್ಲಿಂದ ಸಾರಿಗೆ ವ್ಯವಸ್ಥೆಯನ್ನು ಬಳಸಲು ಅನುಕೂಲ ಮಾಡಿಕೊಡಲಾಗುತ್ತದೆ.

ಚೀನಾದಂಥ ಭಾರೀ ಜನಸಂಖ್ಯೆಯ ದೇಶದಲ್ಲಿ ಸೈಕಲ್‌ಗಳ ಬಳಕೆಗೆ ಹೆಚ್ಚಿನ ಆದ್ಯತೆ ನೀಡಲಾಗುತ್ತಿದೆ. ಅಷ್ಟೇ ಅಲ್ಲ ರಸ್ತೆಗಳಲ್ಲಿ ಕೂಡ ಸೈಕಲ್ ಸವಾರರಿಗೆ ಆದ್ಯತೆ. ಅದೇ ರೀತಿ ಮುಂದುವರಿದ ದೇಶಗಳಲ್ಲಿ ಪಾದಚಾರಿಗಳಿಗೆ ಆದ್ಯತೆ. ಅವರಿಗೆ ಮೊದಲು ದಾರಿ ಬಿಡಬೇಕು ಎಂಬ ನಿಯಮ.

ಇಂಡಿಯಾದ ಮಹಾ ನಗರಗಳಲ್ಲಿ ಮುಖ್ಯ ತೊಂದರೆ ಇರುವುದೇ ಸಾರ್ವಜನಿಕರಿಗೆ ಸಾಮೂಹಿಕ ಸಾರಿಗೆ ವ್ಯವಸ್ಥೆ ಒದಗಿಸುವುದರಲ್ಲಿ. ಇರುವ ಈಗಿನ ಬಸ್‌ಗಳನ್ನು ಎಷ್ಟೇ ಹೆಚ್ಚಿಸಿದರೂ ವಾಹನ ದಟ್ಟಣೆಯ ಸಮಸ್ಯೆ ನಿವಾರಣೆ ಆಗುವುದಿಲ್ಲ.

ಇನ್ನು ಕೆಲವು ವರ್ಷಗಳವರೆಗಾದರೂ ನಾವು ಬಸ್‌ಗಳನ್ನು ನೆಚ್ಚುವುದು ಅನಿವಾರ್ಯ. ಈಗಿರುವ ಐವತ್ತು, ಅರವತ್ತು ಪ್ರಯಾಣಿಕರನ್ನು ಕೊಂಡೊಯ್ಯುವ ನಗರ ಸಾರಿಗೆ ಬಸ್‌ಗಳ ಬದಲು ನೂರಾರು ಪ್ರಯಾಣಿಕರನ್ನು ಒಟ್ಟಿಗೇ ಕರೆದೊಯ್ಯಬಲ್ಲ ವಿಶಾಲ ಬಸ್‌ಗಳನ್ನು ಬಳಸುವುದು ಈಗ ಮುಖ್ಯವಾಗಿದೆ.

ಈಗಿರುವ ಎತ್ತರದ ಛಾಸಿಗಳಿಗಿಂತ, ಕೆಳ

### ಮಾರುಕಟ್ಟೆಗಳಿಗೆ ರಜಾ

ವಾರದ ಒಂದೊಂದು ದಿನ ಒಂದೊಂದು ಭಾಗದ ಅಂಗಡಿಗಳನ್ನು ಸಂಪೂರ್ಣವಾಗಿ ಮುಚ್ಚುವ ವ್ಯವಸ್ಥೆ ಜಾರಿಗೆ ತರುವುದೂ ಸಂಚಾರ ನಿಯಂತ್ರಣದ ಉಪಾಯಗಳಲ್ಲಿ ಒಂದು.

ಇಂಥ ಒಂದು ಪ್ರಯೋಗ ಇತ್ತೀಚೆಗೆ ಕಮರ್ಷಿಯಲ್ ಸ್ಟ್ರೀಟ್‌ನಲ್ಲಿ ಆಗಿತ್ತು. ಆದರೆ ಅದನ್ನು ಮುಂದುವರಿಸಲಿಲ್ಲ.

ಭಾನುವಾರಗಳಂದು ಚಿಕ್ಕಪೇಟೆ, ಬಳೇಪೇಟೆಯ ಅಂಗಡಿಗಳು ಬಹುಪಾಲು ಮುಚ್ಚಿರುತ್ತವೆ. ಆದರೆ ಅಂದು ಹಳೇ ವಸ್ತುಗಳನ್ನು ಮಾರುವ ಸಂಡೇ ಬಜಾರ್ ಜೋರಾಗಿ ನಡೆಯುತ್ತದೆ.

ಹಂತಕ್ಕೆ ಇರಬಹುದಾದ, ವಿಶಾಲ ಬಾಗಿಲುಗಳ, ಚಾಲಕ ಸುಗಮವಾಗಿ ವಾಹನ ನಡೆಸಲು ಅನುಕೂಲ ಇರುವಂಥ ಬಸ್‌ಗಳು ಈಗಾಗಲೇ ಲಭ್ಯವಿದೆ. ಅವನ್ನು ಬಳಕೆಗೆ ತಂದು ಹೆಚ್ಚು ದೂರದ, ನಡುವೆ ಕಡಿಮೆ ಸ್ಟಾಪ್‌ಗಳ ಪ್ರಯಾಣಕ್ಕೆ ಬಳಸುವುದು ಒಂದು ಉತ್ತಮ ವ್ಯವಸ್ಥೆ ಆಗಬಲ್ಲದು. ಬೆಂಗಳೂರು ನಗರಕ್ಕೆ ವೋಲ್ವೋ ಬಸ್‌ಗಳನ್ನು ಒದಗಿಸಲೆಂದು ಸ್ವೀಡನ್‌ನ ಕಂಪೆನಿ ಮುಂದೆ ಬಂದು ಹಲವು ವರ್ಷಗಳೇ ಆಗಿವೆ. ನಗರದ ಹಲವು ಮಾರ್ಗಗಳಲ್ಲಿ ಬಸ್‌ಗಳನ್ನು ಪ್ರಾಯೋಗಿಕವಾಗಿ ಓಡಿಸಿ ನೋಡಿಯಾಗಿದೆ. ಆದರೂ ಇಂಥ ಅನುಕೂಲಕರ ಬಸ್‌ಗಳನ್ನು ಬಳಕೆಗೆ ತರಲು ಮೀನಾ ಮೇಷ ಎಣಿಸುತ್ತಾ ಇದೆ. ಒಂದೊಂದು ಸಲ ವೋಲ್ವೋ ಬಸ್ ಬಳಕೆಯ ಪ್ರಶ್ನೆ ಬಂದಾಗಲೂ ಒಂದಲ್ಲ ಒಂದು ಸಮಸ್ಯೆ ಮುಂದಿಟ್ಟು ಅದರ ಬಳಕೆಯನ್ನು ತಡೆಹಿಡಿಯಲಾಗುತ್ತಿದೆ.

ಇದರ ಹಾಗೇ ವಾಹನ ದಟ್ಟಣೆಯನ್ನು ನಿವಾರಿಸಲು ರಸ್ತೆಗಳನ್ನು ವಿಶಾಲಗೊಳಿಸುವ, ಸಿಗ್ನಲ್ ವ್ಯವಸ್ಥೆಯನ್ನು ಸುಧಾರಿಸುವ ಕೆಲಸ ಆಗಬೇಕಿದೆ. ರಸ್ತೆಗಳನ್ನು ಉತ್ತಮ ಹಂತಕ್ಕೆ ತರುವ ಕಾರ್ಯವನ್ನೇನೋ ಬೆಂಗಳೂರಲ್ಲಿ ಕಳೆದ ಎರಡು ವರ್ಷಗಳಿಂದ ಹುರುಪಿಂದ ಮಾಡಲಾಗುತ್ತಿದೆ. ಆದರೆ ಅದೇ ಮಟ್ಟದಲ್ಲಿ ಸಿಗ್ನಲ್‌ಗಳನ್ನು ಸಿಂಕ್ರೋನೈಸ್‌ಗೊಳಿಸುವ ಕಾರ್ಯದ ಬಗ್ಗೆ ಯಾರೂ ಆಸಕ್ತಿ ತೋರಿಸಿಲ್ಲ.

ಈಗ ವಾಹನಗಳು ಪ್ರತಿ ಸಿಗ್ನಲ್‌ನಲ್ಲಿಯೂ ಕಾಯಬೇಕಾದ ಪರಿಸ್ಥಿತಿ. ಸಿಗ್ನಲ್ ದೀಪಗಳು ನಿರ್ದಿಷ್ಟ ಅವಧಿಯಲ್ಲಿ ಹಸಿರು ದೀಪ ತೋರಿಸುವ ವ್ಯವಸ್ಥೆಯನ್ನು ಸೂಕ್ತವಾಗಿ ಮಾಡಿದರೆ, ಒಂದು ಮಾರ್ಗದಲ್ಲಿ ಹೊರಟ ವಾಹನ ಹೆಚ್ಚು ಅಡೆತಡೆಗಳಿಲ್ಲದೇ ಪ್ರತಿ ಸಿಗ್ನಲ್ ಕಂಬದ ಬಳಿಗೆ ಬರುವ ಹೊತ್ತಿಗೆ ಹಸಿರು ದೀಪ ಕಾಣಿಸಿ, ಸುಗಮವಾಗಿ ಸಾಗುವಂತೆ ವ್ಯವಸ್ಥೆ ಮಾಡಬಹುದು. ಬೆಂಗಳೂರಿನ ಏರ್‌ಪೋರ್ಟ್ ರಸ್ತೆಯಿಂದ ರಾಜಭವನ ಇರುವ ಸ್ಯಾಂಕಿ ರಸ್ತೆಯ ಉದ್ದಕ್ಕೂ ಇಂಥ ವ್ಯವಸ್ಥೆ ಈಗಾಗಲೇ ಜಾರಿಯಲ್ಲಿದೆ. ಉಳಿದೆಡೆ ಇಂಥ ವ್ಯವಸ್ಥೆ ಜಾರಿಗೊಳಿಸುವ ಕೆಲಸ ಆಗಬೇಕಾಗಿದೆ. ಚೆನ್ನೈನಲ್ಲಿ ಈ ವ್ಯವಸ್ಥೆ ಜಾರಿಗೆ ತರಲು ಈಗಾಗಲೇ ಕಾರ್ಯಾರಂಭ ಆಗಿದೆ. ಹೈದರಾಬಾದ್‌ನಲ್ಲಿ ರಸ್ತೆಗಳನ್ನು ವಿಶಾಲಗೊಳಿಸಿ, ಅಗತ್ಯವಾದೆಡೆ ಫ್ಲೈ ಓವರ್‌ಗಳನ್ನು ತ್ವರಿತಗತಿಯಲ್ಲಿ ನಿರ್ಮಿಸಿದ ಕಾರಣ ಅಲ್ಲಿ ಸುಗಮ ವಾಹನ ಸಂಚಾರ ಈಗಾಗಲೇ ಸಾಧ್ಯವಾಗಿದೆ.

ಬೆಂಗಳೂರಿನಂಥ ನಗರಗಳಲ್ಲಿ ಅಧಿಕಾರಿಗಳು, ಉದ್ದಿಮೆಗಳ ಹಿರಿಯರು ಒಬ್ಬೊಬ್ಬರಿಗೆ ಒಂದರಂತೆ ಕಾರುಗಳನ್ನು ಬಳಸುತ್ತಾರೆ. ಇದರ ಬದಲು ಆಯಾ ಆಫೀಸು ಅಥವಾ ಕಾರ್ಖಾನೆಗಳಿಗೆ ಒಂದು ಬಡಾವಣೆಯಿಂದ ತೆರಳುವ ನಾಲ್ಕೈದು ಜನ ಒಟ್ಟಾಗಿ ವಾಹನಗಳನ್ನು ಬಳಸುವ ವ್ಯವಸ್ಥೆ ಜಾರಿ ಆಗುವಂತೆ ಮನ ಒಲಿಸಬೇಕು. ನಮ್ಮಲ್ಲಿ ಕಾರು, ಸ್ಕೂಟರ್ ಮುಂತಾದವು ಕೇವಲ ಸಂಚಾರದ ಸಾಧನಗಳಲ್ಲ. ಅವರವರ ಪ್ರತಿಷ್ಠೆ, ಶ್ರೀಮಂತಿಕೆಯ ಸಂಕೇತವೂ ಹೌದು. ಇಂಥ ಜನರಿಗೆ, ಕಾರ್‌ಗಳಲ್ಲಿ ಒಟ್ಟಾಗಿ ಪ್ರಯಾಣಿಸಿ ಎಂದು ಮನ ಒಲಿಸುವುದು ಕಷ್ಟದ ಕೆಲಸ. ಆದರೆ ಬೇರೆ ಬೇರೆ ಮಾರ್ಗಗಳಿಂದ ಇದನ್ನು ಜಾರಿಗೆ ತರುವುದು ಕಷ್ಟವೇನೂ ಆಗಲಾರದು.

## ನಿಯಂತ್ರಣ

ಸಿಂಗಪುರದಂಥ ನಗರಗಳಲ್ಲಿ ಖಾಸಗಿ ವಾಹನಗಳ ದಟ್ಟಣೆ ಕಡಿಮೆಗೊಳಿಸಲು, ವಾಹನ ಖರೀದಿಸುವ ವ್ಯಕ್ತಿ ಸರ್ಕಾರದಿಂದ ಪರ್ಮಿಟ್ ಪಡೆಯಬೇಕಾಗುತ್ತದೆ. ಅಂಥ ಪರ್ಮಿಟ್ ವ್ಯವಸ್ಥೆ ಜಾರಿಗೆ ತರುವುದು ನಮ್ಮಲ್ಲೂ ಕಷ್ಟ ಆಗಬೇಕಿಲ್ಲ. ಈಗೀಗ ವಾಹನ ತಯಾರಿಕಾ ಸಂಸ್ಥೆಗಳು ಸುಲಭ ಕಂತಿನಲ್ಲಿ ಕಾರು, ದ್ವಿಚಕ್ರ ವಾಹನಗಳನ್ನು ಕೊಡಲು ಸಿದ್ಧವಿದೆ. ಜನ ವಾಹನಗಳನ್ನು ಹೆಚ್ಚು ಹೆಚ್ಚಾಗಿ ಖರೀದಿಸುತ್ತಾ ಇರಲು ಇದೂ ಒಂದು ಕಾರಣ. ಅಗತ್ಯವಿರುವ ವ್ಯಕ್ತಿ ಮಾತ್ರ ವಾಹನ ಖರೀದಿಸಬಹುದು ಎಂಬಂಥ ಪರ್ಮಿಟ್ ವ್ಯವಸ್ಥೆ ಜಾರಿಗೆ ಬಂದಲ್ಲಿ ಖಾಸಗಿ ವಾಹನಗಳ ಸಂಖ್ಯೆ ಈಗಿನ ಹಾಗೆ ಏರುವುದು ನಿಲ್ಲುತ್ತದೆ.

ಈಗ ವಾಹನಗಳ ಸಂಖ್ಯೆ ಜಾಸ್ತಿ ಇರುವುದರಿಂದ ಎಲ್ಲೆಂದರಲ್ಲಿ ಅವುಗಳನ್ನು ನಿಲ್ಲಿಸುವ ಪರಿಪಾಠ ಆರಂಭವಾಗಿದೆ. ಅದರಲ್ಲೂ ರಸ್ತೆಗಳ ಮಗ್ಗುಲಲ್ಲಿ ವಾಹನಗಳ ಸಂತೆಯೇ ಇರುತ್ತದೆ. ಇಂಥ ಪಾರ್ಕಿಂಗ್ ವ್ಯವಸ್ಥೆಗೆ ವಾಹನ ಮಾಲೀಕರು ದಿನಕ್ಕೆ ಹೆಚ್ಚೆಂದರೆ ಐದರಿಂದ ಆರು ರೂಪಾಯಿ ಪಾರ್ಕಿಂಗ್ ಶುಲ್ಕ ತೆರುತ್ತಾರೆ. ವಾಣಿಜ್ಯ ಕೇಂದ್ರಗಳ ಬಳಿ ಹೀಗೆ ನಿಲ್ಲಿಸುವ ವಾಹನಗಳು ಆಕ್ರಮಿಸುವ ಸ್ಥಳಕ್ಕೆ ವಾಸ್ತವವಾಗಿ ದುಬಾರಿ ಬೆಲೆ ಅಥವಾ ಬಾಡಿಗೆ ಇರುತ್ತದೆ. ಚಿಕ್ಕಪೇಟೆ ಅಥವಾ ಅವಿನ್ಯೂ ರಸ್ತೆಯಂಥ ಕಡೆ ಮೂರಡಿ ಅಗಲ ನಾಲ್ಕಡಿ ಉದ್ದದ್ದ ಜಾಗಕ್ಕೆ ವರ್ಷಕ್ಕೆ ಹಲವು ಲಕ್ಷ ರೂ.ಗಳ ಬಾಡಿಗೆ ನೀಡುತ್ತಾರೆ. ಆದರೆ ವಾಹನ ನಿಲ್ಲಿಸುವವರಿಗೆ ಅಷ್ಟೇ ಜಾಗವನ್ನು ಕೆಲವೇ ನೂರು ರೂಪಾಯಿ ಬಾಡಿಗೆಗೆ ಸರ್ಕಾರ ನೀಡಿದಂತಾಗುತ್ತದೆ. ಇಂಥ ಕಡೆ ದುಬಾರಿ ಪಾರ್ಕಿಂಗ್ ಶುಲ್ಕ ವಿಧಿಸುವುದರಿಂದಲೂ ಖಾಸಗಿ ವಾಹನಗಳ ಬಳಕೆಯನ್ನು ನಿಯಂತ್ರಿಸಲು ಸಾಧ್ಯವಿದೆ. ಇದರಿಂದ ಅಂಥ ರಸ್ತೆಗಳಲ್ಲಿ ವಾಹನಗಳು ಸುಗಮವಾಗಿ ಚಲಿಸುವಂತೆ ಮಾಡುವುದೂ ಸಾಧ್ಯ.

## ವಿಚಿತ್ರ ತೆರಿಗೆ ಪದ್ಧತಿ

ವಾಹನಗಳ ಮೇಲೆ ಕಟ್ಟುವ ರಸ್ತೆ ತೆರಿಗೆಯೂ ನಮ್ಮಲ್ಲಿ ವಿಚಿತ್ರವಾಗಿದೆ. ಖಾಸಗಿ ದ್ವಿಚಕ್ರ ವಾಹನಗಳು ತೆರುವ ವಾರ್ಷಿಕ ರಸ್ತೆ ತೆರಿಗೆ ಸುಮಾರು 150 ರೂಪಾಯಿ, ತ್ರಿಚಕ್ರ ವಾಹನಗಳಿಗೆ ಸುಮಾರು 250 ರೂಪಾಯಿ, ಕಾರ್‌ಗಳಿಗೆ 500 ರೂಪಾಯಿ, ಟ್ಯಾಕ್ಸಿಗಳಿಗೆ 600 ರೂಪಾಯಿ, ಟ್ರಕ್‌ಗಳಿಗೆ ಹತ್ತು ಸಾವಿರ ರೂಪಾಯಿ ಹಾಗೂ ಬಸ್‌ಗಳಿಗೆ 1,25,000 ರೂಪಾಯಿ (ಕರ್ನಾಟಕದಲ್ಲಿ ಒಂದು ವಾಹನಕ್ಕೆ ಜೀವಾವಧಿ ತೆರಿಗೆ ಎಂದು ಒಮ್ಮೆಗೇ ನಿಗದಿತ ಮೊತ್ತ ಎಂದು ದ್ವಿಚಕ್ರ ವಾಹನಗಳಿಗೆ ತೆರಿಗೆ ವಸೂಲು ಮಾಡುವುದರಿಂದ ಇನ್ನೂ ಕಡಿಮೆ ತೆರಿಗೆ ಆಗುತ್ತದೆ.)

ಖಾಸಗಿ ವಾಹನಗಳ ಸಂಖ್ಯೆ ಕಡಿಮೆಯಾಗಲು ಇವುಗಳ ಮೇಲಿನ ತೆರಿಗೆ ಜಾಸ್ತಿ ಆಗಿ, ಸಾರ್ವಜನಿಕರು ಬಳಸುವ ಬಸ್‌ಗಳ ಮೇಲಿನ ತೆರಿಗೆ ಕಡಿಮೆ ಆಗಬೇಕು. ಆದರೆ ಇಲ್ಲಿ ಎಲ್ಲಾ ಉಲ್ಟಾ ಆಗಿದೆ.

ಒಂದು ಬಸ್‌ನಲ್ಲಿ 70 ಜನ ಪ್ರಯಾಣಿಸಬಹುದು. ಒಂದು ಬಸ್ ನಿಲ್ಲುವ ಸ್ಥಳದಲ್ಲಿ ಮೂರು ಕಾರುಗಳನ್ನು ನಿಲ್ಲಿಸಬಹುದು. ಆದರೆ ಕಾರ್‌ಗಳಲ್ಲಿ ಪ್ರಯಾಣಿಸುವವರ ಸಂಖ್ಯೆ ಹೆಚ್ಚೆಂದರೆ ಐದು. ಇಲ್ಲಿ ಶ್ರೀಮಂತರ ಮೇಲಿನ ತೆರಿಗೆ ಕಡಿಮೆಗೊಳಿಸಿ, ಸಾಮಾನ್ಯ ಬಡ ಪ್ರಯಾಣಿಕರ ಮೇಲೆ ತೆರಿಗೆ ಹೊರೆ ಏರಿಸಲಾಗಿದೆ.

## ಬ್ಯಾಂಕ್ ಸಾಲದ ನೆರವು

ವಿಶ್ವ ಬ್ಯಾಂಕ್ ಹಾಗೂ ಏಷಿಯನ್ ಡೆವಲಪ್‌ಮೆಂಟ್ ಬ್ಯಾಂಕ್ ಮುಂತಾದವುಗಳು ಈಗೀಗ ರಸ್ತೆ ನಿರ್ಮಾಣಕ್ಕೆ ಸಾಲವನ್ನು ನೀಡುತ್ತಿವೆ. ಅಪಾರ ಮೊತ್ತದ ಈ ಸಾಲವನ್ನು ಸರ್ಕಾರವೇ ವಾಪಾಸು ಮಾಡುವುದು ಆಯಾ ಕಾರು ಹಾಗೂ ನಗರಗಳಿಗೆ ದೊಡ್ಡ ಹೊರೆಯಾಗುತ್ತದೆ.

ಜನರ ಅನುಕೂಲಕ್ಕಾಗಿ ರಸ್ತೆ ನಿರ್ಮಿಸಿರುವಾಗ ಅವರು ಅದನ್ನು ಬಳಸಿಕೊಂಡು ಯಾವುದೇ ದೇಣಿಗೆ ನೀಡದೇ ಇರುವುದನ್ನು ಇಂಥ ಅಂತಾರಾಷ್ಟ್ರೀಯ ಬ್ಯಾಂಕ್‌ಗಳು ಒಪ್ಪುವುದಿಲ್ಲ. ಒಮ್ಮೆ ರಸ್ತೆ ತಯಾರಾದ ಮೇಲೂ ಅದರ ನಿರ್ವಹಣೆ, ದುರಸ್ತಿಗೆ ಆಗಿಂದಾಗ್ಗೆ ಹಣ ಬೇಕಾಗುತ್ತದೆ. ಇದನ್ನೂ ಕೊಡಬೇಕೆಂಬುದು ತರ್ಕಬದ್ಧ ಆಗಲಾರದು.

ಅಂಥ ಸಂದರ್ಭಗಳಲ್ಲಿ ವಾಹನ ದಟ್ಟಣೆಯ ಅವಧಿಯಲ್ಲಿ ರಸ್ತೆ ಬಳಸುವವರು, ಐದಕ್ಕಿಂತ ಕಡಿಮೆ ಜನ ಪ್ರಯಾಣಿಸುವ ಕಾರುಗಳವರು ಇಂತಿಷ್ಟು ಸುಂಕ ತೆರಬೇಕೆಂಬ ನಿಯಮವನ್ನು ಜಾರಿಗೆ ತರಬೇಕಾಗಿ ಬರಬಹುದು.

## ನಗರ ಸಾರಿಗೆಗೇ ಪ್ರತ್ಯೇಕ ವ್ಯವಸ್ಥೆ

ಸಾರ್ವಜನಿಕ ಪ್ರಯಾಣಕ್ಕೆ, ಸುರಕ್ಷತೆಗೆ ಸರ್ಕಾರಗಳು ಅಪಾರ ಹಣ ವೆಚ್ಚ ಮಾಡುವುದೇನೋ ಸರಿ. ಆದರೆ ಇದೊಂದರಿಂದಲೇ ನಗರಗಳ ಸಂಚಾರ ವ್ಯವಸ್ಥೆ ಸುಧಾರಣೆ ಆಗಲಾರದು. ಒಂದು ನಗರದ ರಸ್ತೆ ಬಳಸುವ ಎಲ್ಲ ವಾಹನಗಳು, ರಸ್ತೆ ಸಂಚಾರದ ವ್ಯವಸ್ಥೆ, ಎಲ್ಲವನ್ನೂ ನಿಯಂತ್ರಿಸುವ ಪ್ರತ್ಯೇಕ ವ್ಯವಸ್ಥೆಯೇ ಜಾರಿಗೆ ಬರುವಂತಾಗಬೇಕು. ಆಗ ಮಾತ್ರ ಸಂಚಾರದ ಅನುಕೂಲಗಳನ್ನು ಸಮರ್ಥವಾಗಿ ನಿವಾರಿಸುವುದು ಸಾಧ್ಯ.

■ ಡಾ. ಯೋಗಾನಂದ ಉಪಾಧ್ಯ

# ಸ್ವಯಂ ಶಿಸ್ತಿನ ಕೊರತೆಯೇ ದೊಡ್ಡ ಸಮಸ್ಯೆ

**ಟಿ.ಎಸ್. ಮಡಿಯಾಳ್**

**ಬೆಂಗಳೂರು ಬೆಳೆಯುತ್ತಿರುವ ನಗರ. ಜನಸಂಖ್ಯೆಯ ಜೊತೆಗೆ ವಾಹನಗಳ ಸಂಖ್ಯೆಯೂ ಏರುತ್ತಿದೆ. ವಾಯು ಮಾಲಿನ್ಯದಂಥ ಬೃಹತ್ ಸಮಸ್ಯೆ ತೀವ್ರವಾಗುತ್ತಿದೆ. ಜೊತೆಗೆ ವಾಹನಗಳಲ್ಲಿ ಸಂಚರಿಸುವುದೇ ದುಸ್ತರ, ಆದರೆ ಅನಿವಾರ್ಯ. ಇಂಥ ಪರಿಸ್ಥಿತಿಯಲ್ಲಿ ಸಂಚಾರದ ಸಮಸ್ಯೆಗಳೇನು? ಅದಕ್ಕೆ ಪರಿಹಾರವಿದೆಯೇ? ಎಂಬಂಥ ಪ್ರಶ್ನೆಗಳಿಗೆ ನಗರದ ಪೊಲೀಸ್ ಕಮೀಷನರ್ ಟಿ.ಎಸ್.ಮಡಿಯಾಳ್ ಪ್ರತಿಕ್ರಿಯಿಸಿದ್ದು ಇಲ್ಲಿದೆ.**



*ಪ್ರಶ್ನೆ : ಬೇರೆ ದೇಶಗಳಿಗೂ ನಮ್ಮಲ್ಲಿಗೂ ಸಂಚಾರ ನಿಯಮದಲ್ಲಿ ಗಮನಿಸುವ ಪ್ರಮುಖ ವ್ಯತ್ಯಾಸ ಏನು?*

**ಉತ್ತರ** : ನಮ್ಮಲ್ಲಿ ಸ್ವಯಂ ಶಿಸ್ತಿನ (Self discipline) ಕೊರತೆ ತೀವ್ರ ಆತಂಕಕಾರಿ ಆಗಿದೆ. ಕೆಂಪು ದೀಪ ಇದ್ದಾಗ ನಿಲ್ಲಿಸಬೇಕು, ಹಸಿರು ದೀಪ ಇದ್ದಾಗ ಮುಂದೆ ಹೋಗಬೇಕು. ಇದು ನಿಯಮ. ತಮ್ಮ ಮೇಲೆ ಕಣ್ಣಿಡಲು ಪೊಲೀಸರು ಇದ್ದಾಗ ಮಾತ್ರ ಈ ನಿಯಮ ಪಾಲನೆ ಮಾಡುವ ಮನಸ್ಥಿತಿ ನಮ್ಮಲ್ಲಿ ಹೆಚ್ಚಾಗಿದೆ. ಮುಂದುವರಿದ ದೇಶಗಳಲ್ಲಿ ಇಂಥವರು ಇಲ್ಲವೇ ಇಲ್ಲ ಎಂದಲ್ಲ. ಆದರೆ, ಅಂಥವರ ಸಂಖ್ಯೆ ತೀರಾ ಕಡಿಮೆ.

ಕೇವಲ ವಾಹನ ಚಾಲಕರು ಮಾತ್ರ ನಿಯಮ ಪಾಲಿಸಿದರೆ ಸಾಲದು. ಪಾದಚಾರಿಗಳೂ ನಿಯಮಗಳನ್ನು ಅರಿತು ಪಾಲಿಸುವಂತಾಗಬೇಕು. ವಿದೇಶಗಳಲ್ಲಿ ಪಾದಚಾರಿಗಳಿಗೆ ಆದ್ಯತೆ. ವ್ಯಕ್ತಿಯೊಬ್ಬ ರಸ್ತೆ ದಾಟುತ್ತಾ ಇರಬೇಕಾದರೆ ವಾಹನಗಳವರು ಸಹನೆಯಿಂದ ಕಾಯುತ್ತಾರೆ. ರಾತ್ರಿ ಎಷ್ಟೇ ಹೊತ್ತಾಗಿರಲಿ, ಯಾರೂ ಇಲ್ಲದೇ ಇದ್ದಾಗಲೂ ಸಿಗ್ನಲ್‌ನಲ್ಲಿ ಕೆಂಪುದೀಪ ಬಂದಾಗ ನಿಂತಿದ್ದು, ಹಸಿರು ದೀಪ ಬಂದ ಮೇಲೆಯೇ ಮುಂದೆ ಹೋಗುತ್ತಾರೆ. ಸಂಚಾರದ ನಿಯಮಗಳಿರುವುದು ಜನರ ಸುರಕ್ಷತೆಗಾಗಿ ಎಂಬ ಅರಿವು ಎಲ್ಲರಲ್ಲಿಯೂ ಮೂಡಬೇಕಿದೆ.

*ಪ್ರಶ್ನೆ : ಬೆಂಗಳೂರಿನ ಸಂಚಾರ ವ್ಯವಸ್ಥೆಯ ಮುಖ್ಯ ಸಮಸ್ಯೆಗಳು ಏನು?*

**ಉತ್ತರ** : ವಾಹನಗಳ ದಟ್ಟಣೆ ಹೆಚ್ಚಾಗಿದೆ. ನಗರದಲ್ಲೇ ಹದಿಮೂರು ಲಕ್ಷ ವಾಹನಗಳಿವೆ. ಅವುಗಳಲ್ಲಿ ದ್ವಿ ಚಕ್ರವಾಹನಗಳ ಸಂಖ್ಯೆಯೇ ಒಂಬತ್ತು ಲಕ್ಷಕ್ಕಿಂತ ಹೆಚ್ಚು. ಇನ್ನು ಹೊರ ಊರುಗಳಿಂದ ಬರುವ ವಾಹನಗಳು ಬೇರೆ.

ಇಷ್ಟು ವಾಹನಗಳಿಗೆ ಅಗತ್ಯವಿರುವ ರಸ್ತೆ ಮತ್ತು ಪಾರ್ಕಿಂಗ್ ಸೌಲಭ್ಯ ಅಗತ್ಯ ಪ್ರಮಾಣದಲ್ಲಿ ಬೆಳೆದಿಲ್ಲ. ಪ್ರತಿನಿತ್ಯ ಬೆಂಗಳೂರು ನಗರದೊಳಗಿಂದ ಐದು ಸಾವಿರ. ಲಾರಿಗಳು ಹಾದು ಹೋಗುತ್ತವೆ. ಇವುಗಳ ಜೊತೆಗೆ ನಗರಕ್ಕೆ ಅಗತ್ಯವಿರುವ ತರಕಾರಿ, ಹಾಲು, ಮರಳು, ಕಬ್ಬಿಣ ಮುಂತಾದ ವಸ್ತುಗಳನ್ನು ಒಳಗೆ ತರಲು ಐದು ಸಾವಿರ ಲಾರಿಗಳ ಬಳಕೆ ಆಗುತ್ತದೆ.

ಬೆಂಗಳೂರು ಮಾರ್ಗವಾಗಿ ಹೋಗುವ ಲಾರಿಗಳು ಸಂಚಾರ ತಪ್ಪಿಸಲು ರಿಂಗ್ ರೋಡ್ ಮತ್ತು ಬೈಪಾಸ್ ರಸ್ತೆಗಳ ಅಗತ್ಯ ಇದೆ. ಈಗೀಗ ಅವೆಲ್ಲ ಆಗಲು ಆರಂಭವಾಗಿವೆ.

ಸುಮಾರು ಒಂದು ಸಾವಿರಕ್ಕೂ ಹೆಚ್ಚು ಬಸ್‌ಗಳು ಇಲ್ಲಿಗೆ ದಿನಾ ಬರುತ್ತವೆ. ಅಷ್ಟೇ ಬಸ್‌ಗಳು ಹೊರಗೆ ಹೋಗುತ್ತವೆ. ಅವುಗಳಿಗೆ ಖಾಸಗಿ ಬಸ್ ನಿಲ್ದಾಣ ಇಲ್ಲ.

ಆಟೋರಿಕ್ಷಾಗಳು ಸಾಕಷ್ಟು ಸಂಖ್ಯೆಯಲ್ಲಿ ಇವೆ. ಅವುಗಳಿಗೆ ಆಟೋಸ್ಟ್ಯಾಂಡ್‌ಗಳಿಲ್ಲ. ವಾಹನ ಸಂಚಾರ ದಟ್ಟಣೆ ಹೆಚ್ಚಾಗಿರುವ ಬೆಳಗಿನ ಎಂಟು ಗಂಟೆಯಿಂದ ಹನ್ನೆರಡು ಗಂಟೆವರೆಗೆ ಲಾರಿಗಳು ನಗರ ಪ್ರವೇಶಿಸದಂತೆ ನಿರ್ಬಂಧಿಸಲು ಟ್ರಕ್ ಟರ್ಮಿನಲ್ ಇರಬೇಕು. ಅದಿನ್ನೂ ಆಗಿಲ್ಲ.

ವಿವಿಧ ಬಗೆಯ ವಾಹನಗಳು ಬೇರೆ ಬೇರೆ ಲೇನ್‌ಗಳಲ್ಲಿ ಸಂಚರಿಸಿ ಸುಗಮವಾಗಿ ಸಾಗಲು ಗ್ರೇಡ್ ಸಪರೇಟರ್‌ಗಳು ಬೇಕು. ಅದೂ ಲಭ್ಯವಿಲ್ಲ.

ನಮ್ಮಲ್ಲಿ ಸಾಕಷ್ಟು ಸಿಟಿ ಬಸ್‌ಗಳಿವೆ. ಅವು ನಿಲ್ಲುವ ಸ್ಟಾಪ್‌ಗಳು ರಸ್ತೆಯ ಮಗ್ಗುಲಿಗೇ ಅಂಟಿಕೊಂಡಿರುತ್ತವೆ. ಇದರಿಂದಾಗಿ ರಸ್ತೆಯಲ್ಲಿಯೇ ಸ್ಟಾಪ್ ನೀಡಬೇಕು. ಇದರಿಂದಾಗಿ, ಇರುವ ರಸ್ತೆಯಲ್ಲಿ ಬಸ್ ನಿಂತುಬಿಟ್ಟರೆ ಉಳಿದ ವಾಹನಗಳ ಸಂಚಾರಕ್ಕೆ ಅನಾನುಕೂಲ. ಕನಿಷ್ಠ ಪ್ರಮುಖ ಸ್ಥಳಗಳಲ್ಲಿ ಆದರೂ BAY ನಿರ್ಮಾಣ ಆಗಬೇಕು. ಸ್ಟಾಪ್‌ಗಳಲ್ಲಿ ಬಸ್‌ಗಳು ರಸ್ತೆಯಲ್ಲಿಯೇ ನಿಲ್ಲುವ ಬದಲು ಸ್ವಲ್ಪ ಒಳಕ್ಕೆ ಹೋಗಿ ನಿಲ್ಲುವಂತೆ ಮಾಡುವ ಈ 'ಬೇ'ಗಳಿಂದ ಉಳಿದ ವಾಹನಗಳ ಸಂಚಾರ ಸುಗಮವಾಗುತ್ತದೆ.

ಇನ್ನು ಪಾರ್ಕಿಂಗ್ ಸಮಸ್ಯೆ. ಅಪಾರ್ಟ್‌ಮೆಂಟ್‌ಗಳಲ್ಲಿ ಸಂದರ್ಶಕರ ವಾಹನಗಳಿಗೆ ಪಾರ್ಕಿಂಗ್ ವ್ಯವಸ್ಥೆ ಇರುವುದಿಲ್ಲ. ವಾಣಿಜ್ಯ ಸಂಕೀರ್ಣ, ಹೋಟೆಲುಗಳ ಬಳಿ ಅಲ್ಲಿ ಭೇಟಿ ನೀಡುವ ಜನರ ವಾಹನಗಳಿಗೆ ಪಾರ್ಕಿಂಗ್ ಒದಗಿಸಿರುವುದಿಲ್ಲ. ಈ ಎಲ್ಲ ವಾಹನಗಳೂ ರಸ್ತೆಯ ಮಗ್ಗುಲಲ್ಲೇ ನಿಂತು ರಸ್ತೆ ಇಕ್ಕಟ್ಟಾಗುತ್ತದೆ. ಇಂಥ ಸಮುಚ್ಚಯಗಳು ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸುವಂತೆ ಕಟ್ಟುನಿಟ್ಟಾದ ನಿಯಮ ಜಾರಿಗೆ ಬರಬೇಕು.

ಆಫೀಸು, ಮಾರುಕಟ್ಟೆಗಳಿಗೆ ಬರುವವರು ರಸ್ತೆಯ ಬದಿಯಲ್ಲೇ ವಾಹನಗಳನ್ನು ನಿಲ್ಲಿಸುವ ವ್ಯವಸ್ಥೆ ಬದಲು ಬಹು ಅಂತಸ್ತಿನ ಪಾರ್ಕಿಂಗ್ ಲಾಟ್‌ಗಳು ಬರಬೇಕು.

*ಪ್ರಶ್ನೆ : ಈ ಸಮಸ್ಯೆಗಳನ್ನು ಪೊಲೀಸ್ ಇಲಾಖೆ ಒಂದೇ ನಿವಾರಿಸಲು ಸಾಧ್ಯ ಇಲ್ಲ ಅಲ್ಲವೇ?*

**ಉತ್ತರ** : ಸಂಚಾರ ವ್ಯವಸ್ಥೆ ಎನ್ನುವುದು ಹಲವು ಇಲಾಖೆಗಳು ಸೇರಿ ಒಟ್ಟಾರೆಯಾಗಿ ನಿರ್ವಹಿಸಬೇಕಾದ ಕೆಲಸ. ಸಂಚಾರ ನಿರ್ವಹಣೆಯಲ್ಲಿ ಎದುರಿಸುವ ತೊಂದರೆ, ಅವುಗಳ ನಿವಾರಣೆಗೆ ಕ್ರಮಗಳ ಕುರಿತು ಸಂಬಂಧಿಸಿದ

ಇಲಾಖೆಗಳು ಸೇರಿಯೇ ಚರ್ಚಿಸುತ್ತವೆ.

ಸಂಪನ್ಮೂಲದ ಕೊರತೆಯಿಂದಾಗಿ ನಾವು ಸೂಚಿಸುವ ಪರಿಹಾರ ಬೇಗ ಆಗುವುದಿಲ್ಲ.

***ಪ್ರಶ್ನೆ : ನಗರದ ಸಂಚಾರ ನಿರ್ವಹಣೆಗೆ ಇರುವ ಪೊಲೀಸ್ ಸಿಬ್ಬಂದಿ ಎದುರಿಸುವ ಬಹುಮುಖ್ಯ ಸಮಸ್ಯೆಗಳೇನು?***

**ಉತ್ತರ :** ಈಗ ಸಂಚಾರ ನಿರ್ವಹಣೆಗೆ 1500 ಜನ ಇದ್ದಾರೆ. ಇದು ಸಾಲದು. ಇನ್ನೂ ಬೇಕೆಂದು ತಿಳಿಸಿದ್ದೇವೆ. ಅದು ಶೀಘ್ರದಲ್ಲಿ ಆಗಲೂಬಹುದು.

ಸಿಬ್ಬಂದಿ ಕೊರತೆಯಿಂದಾಗಿ ಇರುವ ಜನರೇ ಹೆಚ್ಚು ಕೆಲಸ ಮಾಡಬೇಕಾಗುತ್ತದೆ. ಕೆಲಸದ ಒತ್ತಡ ಅವರ ಮೇಲೆ ಜಾಸ್ತಿ ಇದೆ.

ಸಂಚಾರಿ ನಿಯಮ ಪಾಲಿಸುವವರಿಗಿಂತ ಉಲ್ಲಂಘಿಸುವವರ ಸಂಖ್ಯೆ ಹೆಚ್ಚಿರುವುದೇ ನಮ್ಮ ಸಿಬ್ಬಂದಿ ಎದುರಿಸುವ ಬಹುದೊಡ್ಡ ಸಮಸ್ಯೆ.

ಇದರಿಂದಾಗಿ ಸಾಕಷ್ಟು ಅನಾಹುತಗಳು ಸಂಭವಿಸುತ್ತವೆ. ಎಂಬ ಪರಿಜ್ಞಾನವೂ ಇಲ್ಲದೆ ಜನ ವರ್ತಿಸುತ್ತಾರೆ. ಇದರಿಂದಾಗ ಆತ್ಮಸ್ಥೈರ್ಯದಿಂದ ಪೊಲೀಸರು ಕೆಲಸ ಮಾಡಲು ಕಷ್ಟವಾಗುತ್ತದೆ.

***ಪ್ರಶ್ನೆ : ಬೆಂಗಳೂರಿನ ಸಂಚಾರ ಸಮಸ್ಯೆಗೆ ತುರ್ತಾಗಿ ಆಗಬೇಕಾದ ಪರಿಹಾರ ಏನು?***

**ಉತ್ತರ :** ಫ್ಲೈ ಓವರ್, ಪಾರ್ಕಿಂಗ್ ಲಾಟ್‌ಗಳಾಗಬೇಕು. ವಾಹನ ದಟ್ಟಣೆ ಇರುವ ಅವಧಿಯಲ್ಲಿ ಹೆಚ್ಚು ಜನರನ್ನು ಶೀಘ್ರವಾಗಿ ಕರೆದೊಯ್ಯುವಲ್ಲಿ ವಾಹನಗಳನ್ನು ಬಳಕೆಗೆ ತರಬೇಕು. ಮುಖ್ಯವಾಗಿ ಜನರಲ್ಲಿ ಸ್ವಯಂ ಶಿಸ್ತು ಬೆಳೆಯುವುದು ಅತ್ಯಗತ್ಯ.

***ಪ್ರಶ್ನೆ : ಮದ್ಯಪಾನ ಮಾಡಿ ವಾಹನ ನಡೆಸುವದರಿಂದ ಹೆಚ್ಚಿನ ಅಪಘಾತಗಳಾಗುತ್ತಾ ಇವೆಯೇ?***

**ಉತ್ತರ :** ಅಂಥ ಏರಿಕೆ ಕಂಡುಬಂದಿಲ್ಲ. ಆದರೆ ಅದು ಸಂಭವಿಸದಂತೆ ತಡೆಯಲು ರಾತ್ರಿ ಹೊತ್ತು ಚೆಕಿಂಗ್ ಬಿಗಿಗೊಳಿಸಲಾಗಿದೆ. ಈಚಿನ ದಿನಗಳಲ್ಲಿ ಮದ್ಯಪಾನ ಮಾಡುವುದು 'ಸೋಷಿಯಲ್' ಎಂಬಂಥ ಭಾವನೆ ಹೆಚ್ಚಾಗುತ್ತಾ ಇದೆ. ಅದರಲ್ಲೂ ಎಳೆಯರಲ್ಲಿ ಪ್ರವೃತ್ತಿ ಹೆಚ್ಚಾಗುತ್ತಾ ಇದೆ.

***ಪ್ರಶ್ನೆ : ನಗರದ ಸಿಗ್ನಲ್ ವ್ಯವಸ್ಥೆಯ ಸಿಂಕ್ರೋನೈಸೇಷನ್ ಆದರೆ ಸಮಸ್ಯೆ ಕಡಿಮೆ ಆಗುತ್ತದೆಯೇ?***

**ಉತ್ತರ :** ಸಿಗ್ನಲ್ ವ್ಯವಸ್ಥೆಯ ಸಿಂಕ್ರೋನೈಸೇಷನ್ ಎಂಬ ಪದಪ್ರಯೋಗವೇ ಸರಿ ಅಲ್ಲ. ಅದನ್ನು 'ಕೊ ಆರ್ಡಿನೇಷನ್' ಎನ್ನಬಹುದು. ನಮ್ಮಲ್ಲಿನ ಸಿಗ್ನಲ್ ವ್ಯವಸ್ಥೆ ಕೆಲಸ ಮಾಡಲು ನಿಜವಾದ ಅರ್ಥದಲ್ಲಿ ಆರಂಭಿಸಿದ್ದು ಕಳೆದ ಎರಡು ವರ್ಷಗಳಿಂದ ಅಷ್ಟೇ. ಯಾವುದೇ ನಿಯಮ ಅರಿತುಕೊಂಡು ಪಾಲಿಸಿದಾಗಲೇ ವ್ಯವಸ್ಥೆ ಚೆನ್ನಾಗಿರುತ್ತದೆ. ಅದರ ಬದಲು ಬಲ ಪ್ರಯೋಗಿಸಿ ಅದನ್ನು ಅನುಷ್ಠಾನಗೊಳಿಸಬೇಕು ಎಂದಾದರೆ ಕಷ್ಟ. ಅಂಥ ಸ್ಥಿತಿಯಿಂದಾಗಿಯೇ ಭಾರೀ ಒತ್ತಡವನ್ನು ನಮ್ಮ ಸಿಬ್ಬಂದಿ ಎದುರಿಸಬೇಕಾಗುತ್ತದೆ.

ಸಂಚಾರ ವ್ಯವಸ್ಥೆ ನಿಯಂತ್ರಿಸುವ ಪೊಲೀಸರಿರುವುದು ತಮ್ಮ ಸುರಕ್ಷತೆಗೆ ಎಂಬ ತಿಳುವಳಿಕೆಯಿಂದ ಜನರೂ ಸಹಕಾರ ನೀಡಿದರೆ ಈ ಸಮಸ್ಯೆ ನಿವಾರಣೆ ಆಗುತ್ತದೆ. ಇದಲ್ಲದೇ ಸಂಚಾರಿ ವಿಭಾಗದ ಪೊಲೀಸರು ಕೆಲಸ ನಿರ್ವಹಿಸುವಾಗ ಹೊಗೆ, ಧೂಳಿನ ನಡುವೆ ನಿಂತಿರಬೇಕು. ಇದರಿಂದಾಗಿ ನಾನಾ ರೀತಿಯ ಆರೋಗ್ಯದ ತೊಂದರೆಗಳು ಕಾಣುತ್ತವೆ. ಮುಖ್ಯವಾಗಿ ಶ್ವಾಸಕೋಶದ ತೊಂದರೆಗಳು ಅಂಥವರಲ್ಲಿ ಹೆಚ್ಚು.

***ಪ್ರಶ್ನೆ : ಅಪಘಾತಗಳ ಸಂಖ್ಯೆ ಹೆಚ್ಚಾಗಿದೆಯೇ?***

**ಉತ್ತರ :** ಹಾಗೆ ನೋಡಿದರೆ ಕಳೆದ ಎರಡು ವರ್ಷಗಳಲ್ಲಿ ಅಪಘಾತಗಳ ಸಂಖ್ಯೆ ಇಳಿಮುಖ ಆಗಿದೆ ಎಂದೇ ಹೇಳಬೇಕು. 1998ರಲ್ಲಿ 7675 ಪ್ರಕರಣ ಆಗಿದ್ದರೆ 1977ರಲ್ಲಿ ಇಂಥ ಅಪಘಾತಗಳ ಸಂಖ್ಯೆ 7294ಕ್ಕೆ ಇಳಿದಿದೆ. ಸರಾಸರಿ ವರ್ಷಕ್ಕೆ ಆರುನೂರು ಜನ ರಸ್ತೆ ಅಪಘಾತಗಳಿಂದ ಸಾಯುತ್ತಾರೆ. ಶೇಕಡಾ ಐದರಿಂದ ಹತ್ತರಷ್ಟು ಜನ ತೀವ್ರ ದೈಹಿಕ ತೊಂದರೆಗೆ ಈಡಾಗಬಹುದು. ಇಂಥ ಅಪಘಾತಗಳಲ್ಲಿ ಶೇಕಡಾ 25ರಷ್ಟು ಜನಕ್ಕೆ ತೀವ್ರರೀತಿಯ ಗಾಯಗಳಾಗುತ್ತವೆ. ಅವರು ಹಲವು ದಿನ, ವಾರಗಳಾದರೂ ಆಸ್ಪತ್ರೆಯಲ್ಲಿ ಇದ್ದು ಚಿಕಿತ್ಸೆ ಪಡೆಯಬೇಕಾಗುತ್ತದೆ. ಈಗ ಕೋ ಆರ್ಡಿನೇಷನ್ ಮಾಡುವ ಕೆಲಸ ಕೂಡಾ ನಡೆಯುತ್ತಾ ಇದೆ.

***ಪ್ರಶ್ನೆ : ನಗರದಲ್ಲಿ ರಿಕ್ಷಾಗಳ ಬದಲು ಟ್ಯಾಕ್ಸಿಗಳನ್ನು ಓಡಿಸುವ ವಿಚಾರ ಇದೆಯೇ?***

**ಉತ್ತರ :** ಸದ್ಯಕ್ಕಂತೂ ಇಲ್ಲ. ರಿಕ್ಷಾಗಳನ್ನು ತೆಗೆದು ಹಾಕಿದರೆ ಅವೆಲ್ಲವನ್ನೂ ಏನು ಮಾಡಬೇಕು? ಎಂಬ ಪ್ರಶ್ನೆ ಏಳುತ್ತದೆ. ಟ್ಯಾಕ್ಸಿಗಳು ಬಂದರೆ ವಾಯುಮಾಲಿನ್ಯ ಕಡಿಮೆ ಎಂಬುದು ನಿಜ. ಆದರೆ ಅವು ರಿಕ್ಷಾಗಳಿಗಿಂತ ಹೆಚ್ಚು ಜಾಗ ಆಕ್ರಮಿಸುತ್ತವೆ. ಐದು ಜನ ಕೂರುವ ಟ್ಯಾಕ್ಸಿಯಲ್ಲಿ ಒಬ್ಬರೋ ಇಬ್ಬರೋ ಪ್ರಯಾಣ ಮಾಡುವುದಾದರೆ ಅದೂ ಕೂಡ ವ್ಯರ್ಥ ಪ್ರಯೋಗ ಆಗುತ್ತದೆ. ವಾಹನಗಳ ಸಂಖ್ಯೆ ಜಾಸ್ತಿ ಆಗುತ್ತದೆ.

ಈಗೀಗ ಸಿಟಿ ಟ್ಯಾಕ್ಸಿಗಳ ಪ್ರಯೋಗ ಆರಂಭವಾಗಿದೆ. ಅದು ಚೆನ್ನಾಗಿಯೇ ಕೆಲಸ ಮಾಡುತ್ತಿದೆ. ಮುಂದೆ ನೋಡಬೇಕು.

# ಜಾಣ ಸಂಚಾರ ನಿರ್ವಹಣೆ

ಬದುಕಿನ ಎಲ್ಲ ರಂಗಗಳಿಗೂ ಕಂಪ್ಯೂಟರ್ ಪ್ರವೇಶಿಸಿದೆ. ಸಂಚಾರ ವ್ಯವಸ್ಥೆಯ ನಿರ್ವಹಣೆಗೂ ಕಂಪ್ಯೂಟರ್ ಬಂದಿದೆ. ಇದನ್ನು ಜಾಣ ಸಂಚಾರ ನಿರ್ವಹಣೆ ತಂತ್ರಜ್ಞಾನ ಎಂದು ಕರೆಯಬಹುದು.

ವಾಹನಗಳ ದಟ್ಟಣೆ, ಅಪಘಾತಗಳೂ ಸೇರಿದಂತೆ ಸಂಚಾರ ಸಮಸ್ಯೆಗಳಿಗೆ ಈ ಕಂಪ್ಯೂಟರ್ ನಿರ್ವಹಿಸಬಲ್ಲದು. ಲೇಸರ್, ಆಪ್ಟಿಕಲ್ ತಂತ್ರ, ಪ್ರತಿಮಾ ಸಂಸ್ಕರಣ (ಇಮೇಜ್ ಪ್ರೋಸೆಸಿಂಗ್) ಮತ್ತು ಗ್ಲೋಬಲ್ ಪೊಸಿಷನಿಂಗ್ ಸಿಸ್ಟಂ ಮೂಲಕ ವಾಹನ ದಟ್ಟಣೆಯ ಬದಲು ಚಾಲಕರು ಸುಗಮ ದಾರಿ ಆರಿಸಿಕೊಳ್ಳಲು ಇದು ನೆರವಾಗಬಲ್ಲದು. 1939ರಲ್ಲಿ ಮೊದಲು ಈ ವಿಚಾರ ಸುಳಿಯಿತು. ಅಂದಿನಿಂದಲೂ ಈ ವ್ಯವಸ್ಥೆಯನ್ನು ಜಾರಿಗೆ ತರಲು ಯತ್ನಗಳು ನಡೆಯುತ್ತಿವೆ. ಇಂಥ ಸಂಚಾರ ನಿರ್ವಹಣೆ ಹೆದ್ದಾರಿಗಳಲ್ಲಿ ತೀರಾ ಉಪಯುಕ್ತ. ಈ ವ್ಯವಸ್ಥೆಯಲ್ಲಿ ಪ್ರತಿ ವಾಹನದಲ್ಲೂ ಒಂದೊಂದು ಕಂಪ್ಯೂಟರ್ ಇರುತ್ತದೆ. ಅದು ಉಳಿದ ಕಾರು ಅಥವಾ ವಾಹನಗಳ ಕಂಪ್ಯೂಟರ್ ಹಾಗೂ ಕೇಂದ್ರ ಕಂಪ್ಯೂಟರ್‌ಗೆ ಸಂಪರ್ಕ ಪಡೆದಿರುತ್ತದೆ. ಒಮ್ಮೆ ಈ ವಾಹನ ಹೆದ್ದಾರಿ ಸೇರಿದರೆ, ಅಲ್ಲಿಂದ ಗುರಿ ಮುಟ್ಟುವವರೆಗೆ ಒಂದು ಗುಂಪಾಗಿ ಇತರ ವಾಹನಗಳೊಡನೆ ಚಲಿಸುತ್ತದೆ. ಪ್ರತಿ ವಾಹನದ ಕಂಪ್ಯೂಟರೂ ಪರಸ್ಪರ ಸಂಪರ್ಕ ಹೊಂದಿದ್ದು ವಾಹನಗಳ ನಡುವಣ ಅಂತರ, ಅನುಸರಿಸಬೇಕಾದ ಮಾರ್ಗ ಮುಂತಾದವೆಲ್ಲ ಕರಾರುವಕ್ಕಾಗಿ ಪಾಲನೆ ಆಗುತ್ತವೆ.

ಈ ವ್ಯವಸ್ಥೆ ಜಾರಿಗೆ ಬಂದರೆ ರಸ್ತೆಯನ್ನು ವಿಶಾಲಗೊಳಿಸದೇ ಹೆಚ್ಚು ವಾಹನಗಳು ಸುಗಮವಾಗಿ ಸಾಗಬಹುದಾದ ವ್ಯವಸ್ಥೆ ಸಾಧ್ಯವಾಗುತ್ತದೆ. ಅದಕ್ಕೆಂದೇ ಅಮೇರಿಕಾ ಮುಂತಾದ ದೇಶಗಳು ಇಂಥ ಕೇಂದ್ರ ನಿಯಂತ್ರಿತ ಯಂತ್ರ ಚಾಲಿತ ವಾಹನಗಳಿಗೆಂದೇ ಪ್ರತ್ಯೇಕ ಲೇನ್‌ಗಳನ್ನು ಮೀಸಲಿಡುವ ಕಾರ್ಯ ಕೈಗೆತ್ತಿಕೊಂಡಿದ್ದಾರೆ.

ಒಮ್ಮೆ ಇಂಥ ವಾಹನ ಗುರಿ ಮುಟ್ಟಿದ ನಂತರ ಅದನ್ನು ಚಾಲಕ ತನ್ನ ವಶಕ್ಕೆ ತೆಗೆದುಕೊಂಡು ಬೇಕೆಂದೆಡೆ ನಡೆಸಿಕೊಂಡು ಹೋಗಬಹುದು.

ಭಾರತದ ಮಟ್ಟಿಗಂತೂ ಇದು ಸದ್ಯಕ್ಕೆ ಕನಸಿನ ವ್ಯವಸ್ಥೆ.



# ವಾಕಿಂಗ್ ಮಾಡಿ ತೆಳ್ಳಗಾಗಿ

ಗೀತಾ ವಾಕಿಂಗ್ ಅಭ್ಯಾಸ ಆರಂಭಿಸಿದ್ದು ಆಕಸ್ಮಿಕ. ಮೂರು ವರ್ಷದ ಹಿಂದೆ ಸಂಜೆ ಮನೆಗೆ ಬರಲು ಬಸ್ ಸಿಗಲಿಲ್ಲ. ರಿಕ್ಷಾ ವಿಚಾರಿಸಿದರೆ ಯಾರೂ ಅತ್ತ ಕಡೆ ಬರಲು ತಯಾರಿರಲಿಲ್ಲ. ಬರಲು ಒಪ್ಪಿದವರೂ ಬಾಯಿಗೆ ಬಂದ ಬಾಡಿಗೆ ಕೇಳತೊಡಗಿದರು. ಇದರಿಂದ ಸಿಟ್ಟಿಗೆದ್ದ ಅವರು ಮನೆಗೆ ನಡೆದೇ ಹೋಗಲು ನಿರ್ಧರಿಸಿದರು. ಜೊತೆಗೆ ಇನ್ನಿಬ್ಬರೂ ಇದ್ದರು. ವಿಧಾನಸೌಧದ ಹತ್ತಿರವಿರುವ ಅವರ ಆಫೀಸಿಂದ ಮಲ್ಲೇಶ್ವರಂನ ಅವರ ಮನೆಗೆ ಸುಮಾರು ಆರು ಕಿಲೋಮೀಟರು. ಅವತ್ತು ಹಟ ಹಿಡಿದು ನಡೆಯಲು ಆರಂಭಿಸಿದ ಮೇಲೆ, ಅದೇ ಅಭ್ಯಾಸವಾಗಿದೆ. ಇದರಿಂದ ದುಡ್ಡು ಉಳಿಯುತ್ತದೆ ಎಂದಷ್ಟೆ ಮೊದಲ ಲೆಕ್ಕಾಚಾರ ಆಗಿತ್ತು. ಆದರೆ ಸಂಜೆಯ ವಾಕಿಂಗ್‌ನಿಂದ ನಾನಾ ರೀತಿಯ ಲಾಭಗಳಾಗಿವೆ ಎಂಬುದು ಗೀತಾ ಅಭಿಪ್ರಾಯ. ಮುಖ್ಯವಾಗಿ ಅವರ ಮೈ ಕರಗಿದೆ. ಸಾಕಷ್ಟು ಲವಲವಿಕೆ ಮೂಡಿದೆ. ಅವತ್ತು ಆಕಸ್ಮಿಕವಾಗಿ ಆರಂಭವಾದ ಪಾದಯಾತ್ರೆ, ಅವರ ನಿತ್ಯದ ಕ್ರಮವಾಗಿದೆ. ಮೊದಲೆರಡು ದಿನ ಉತ್ಸಾಹದಿಂದ ಜೊತೆ ನಡೆದು ಬಂದ ಸಹೋದ್ಯೋಗಿಗಳು ಆಮೇಲೆ ನಾನಾ ನೆಪ ತೆಗೆದು ರಿಕ್ಷಾ, ಬಸ್ ಏರಿ ಹೋಗಲು ಆರಂಭಿಸಿದರು. ಸಂಜೆಯ ಪಾದಯಾತ್ರೆ ಅಲ್ಲಿಗೇ ನಿಲ್ಲಿಸಿದ ಗೀತಾ, ಬೆಳಗಿನ ಹೊತ್ತು, ಅದೂ ಸಾಧ್ಯ ಆಗದೇ ಇದ್ದಾಗ ಸಂಜೆ ಮನೆಗೆ ಬಂದ ಮೇಲೆ ಪತಿಯೊಡನೆ ವಾಕಿಂಗ್ ಮಾಡಲಾರಂಭಿಸಿದರು.

ಅವತ್ತು ಹಟ ಹಿಡಿದು ನಡೆಯಲು ಆರಂಭಿಸಿದ ಮೇಲೆ, ಅದೇ ಅಭ್ಯಾಸವಾಗಿದೆ. ಇದರಿಂದ ದುಡ್ಡು ಉಳಿಯುತ್ತದೆ ಎಂದಷ್ಟೆ ಮೊದಲ ಲೆಕ್ಕಾಚಾರ ಆಗಿತ್ತು. ಆದರೆ ಸಂಜೆಯ ವಾಕಿಂಗ್‌ನಿಂದ ನಾನಾ ರೀತಿಯ ಲಾಭಗಳಾಗಿವೆ ಎಂಬುದು ಗೀತಾ ಅಭಿಪ್ರಾಯ. ಮುಖ್ಯವಾಗಿ ಅವರ ಮೈ ಕರಗಿದೆ. ಸಾಕಷ್ಟು ಲವಲವಿಕೆ ಮೂಡಿದೆ.

ಈ ಮುಂಚೆ ಮೈ ಕರಗಿಸಲು ಡಯಟಿಂಗ್, ವ್ಯಾಯಾಮ ಎಂದೆಲ್ಲ ಆಕೆ ಮಾಡಿದ್ದುಂಟು. ಅವೆಲ್ಲ ಮಾಡುವಷ್ಟು ದಿನ ಪರಿಣಾಮಕಾರಿಯಾಗೇ ಇರುತ್ತಿತ್ತು. ಒಮ್ಮೆ ಅಭ್ಯಾಸ ತಪ್ಪಿದರೆ ಒಂದಕ್ಕೆರಡರಂತೆ ತೂಕ ಹೆಚ್ಚಾಗುತ್ತಿತ್ತು. ಇವೆಲ್ಲ ಕಂಡು ರೋಸಿದ ಅವರು 'ಹೇಗಿದ್ದರೇನು! ಮದುವೆ ಆಗಿದೆ. ಮಕ್ಕಳಾಗಿವೆ. ಇನ್ನೇನು ಕಡಿದು ಕಟ್ಟೆ ಹಾಕಬೇಕಿದೆ' ಅಂದುಕೊಂಡು ಸುಮ್ಮನೆ ಆಗಿದ್ದರು.

ವಾಕಿಂಗ್ ಆರಂಭಿಸಿದ ಎರಡು, ಮೂರು ತಿಂಗಳಲ್ಲೇ ಮೈಯೆಲ್ಲ ಹಗುರಾದಂತಾಗಿ, ಹೆಚ್ಚು ಉತ್ಸಾಹದಿಂದ ಕೆಲಸ ಮಾಡಲು ಸಾಧ್ಯ ಆದದ್ದು ಗಮನಕ್ಕೆ ಬಂತು. ಐದಾರು ತಿಂಗಳಲ್ಲಿ ಬಿಗಿಯಾಗುತ್ತಿದ್ದ ಬಟ್ಟೆಗಳು ಸಡಿಲ ಆಗಲಾರಂಭಿಸಿದಾಗಲೇ ಆಕೆಗೆ ತಾನು ತೆಳ್ಳಗಾಗುತ್ತಾ ಇದ್ದೇನೆ ಅನ್ನಿಸಿದ್ದು.

ಒಂದು ವರ್ಷ ಕಳೆಯುವಷ್ಟರಲ್ಲಿ ಮೂರ್‍ನಾಲ್ಕು ಕೆ.ಜಿ. ಮೈಭಾರ ಕಳೆದಿತ್ತು. ಇದನ್ನು ಗಮನಿಸಿದ ಆಕೆಯ ಮೇಲಾಧಿಕಾರಿ ವೀಣಾ ರಾಮನ್ ಮನೆಯಲ್ಲೇ ಒಂದು ಟ್ರೆಡ್‌ಮಿಲ್ ತಂದಿಟ್ಟುಕೊಂಡಿದ್ದಾರೆ. ಮನೆಯಲ್ಲೇ ಟಿವಿ ನೋಡುತ್ತಾ ವಾಕಿಂಗ್ ಮಾಡುವ ಸುಯೋಗ ಅವರದು. ಅದು ಅವರಿಗೂ ಇಷ್ಟವಾಗಿದೆ.

ಮೊದಲು ಮೊದಲು ಎಷ್ಟು ಹೊತ್ತು ವಾಕಿಂಗ್ ಹೋಗಬೇಕು? ಎಷ್ಟು ವೇಗವಾಗಿ ನಡೆಯಬೇಕು? ಎಂದೆಲ್ಲ ವೀಣಾ ರಾಮನ್ ಪ್ರಶ್ನಿಸಲು ತೊಡಗಿದಾಗ ಗೀತಾಗೆ ಉತ್ತರ ತೋಚುತ್ತಾ ಇರಲಿಲ್ಲ. ಅವರು ಸಹಜವಾಗಿ ವಾಕಿಂಗ್‌ನಲ್ಲಿ ತೊಡಗಿದ್ದರು. ಆಫೀಸಿಂದ ಮನೆಗೆ ಸುಮಾರು ಆರು ಕಿಲೋ ಮೀಟರ್. ಮಕ್ಕಳು ಕಾಯುತ್ತಾ ಇರುತ್ತಾರೆ ಎಂಬ ಅರಿವಿಂದ ಸಾಕಷ್ಟು ವೇಗವಾಗಿಯೇ ನಡೆದು ಮನೆ ಸೇರುತ್ತಿದ್ದರು. ಎಷ್ಟೇ ವೇಗವಾಗಿ ನಡೆದರೂ ಮುಕ್ಕಾಲು ಗಂಟೆಗಿಂತ ಮುಂಚೆ ಮನೆ ಸೇರುವುದು ಆಗುತ್ತಾ ಇರಲಿಲ್ಲ. ಮೇಲಾಧಿಕಾರಿ ಪ್ರಶ್ನಿಸಲಾರಂಭಿಸಿದ ಮೇಲೆ, ತಮ್ಮ ಮನೆ ವೈದ್ಯರನ್ನು ಕಂಡು ವಿಚಾರಿಸಿದರು. ವಾಕಿಂಗ್ ಸಹಜವಾಗದ ವ್ಯಾಯಾಮ. ನಡೆಯುವುದು ಮನುಷ್ಯನಿಗೆ ಮೊದಲಿಂದ ರೂಢಿ. ಅದರಿಂದ ಸಾಕಷ್ಟು ದೇಹಕ್ಕ ಕೆಲಸ ದೊರೆಯುತ್ತದೆ. ಕೀಲುಗಳು, ಸ್ನಾಯುಗಳು ಸರಾಗವಾಗಿ ಚಲಿಸುತ್ತವೆ. ಸರಿಯಾಗಿ ವಾಕಿಂಗ್ ಮಾಡಿದರೆ ಆಯಾಸ ಕೂಡ ಆಗುವುದಿಲ್ಲ. ಒಳ್ಳೆಯ ಗಾಳಿಸೇವನೆ ಸಾಧ್ಯ. ಮುಖ್ಯ, ಮನಸ್ಸು ತಿಳಿಯಾಗುತ್ತದೆ ಎಂದು ಅವರು ಹೇಳಿದರು.



ಐದಾರು ಕಿಲೋ ಮೀಟರ್ ನಡಿಗೆ ಸಾಕು. ನಿತ್ಯ ಮಾಡಲು ಸಾಧ್ಯ ಆಗದೇ ಇದ್ದಲ್ಲಿ ದಿನ ಬಿಟ್ಟು ದಿನ ಮಾಡಬಹುದು. ವಾರಕ್ಕೊಮ್ಮೆ ಟ್ರೆಕ್ಕಿಂಗ್ ಹೋಗಿದ್ದರೂ ಅದೇ ಪರಿಣಾಮ ಆಗುತ್ತದೆ. ಮುಕ್ಕಾಲು ತಾಸಿಂದ ಒಂದು ತಾಸು ವಾಕಿಂಗ್ ಅವಧಿ ಆದರೆ ಒಳ್ಳೆಯದು ಎಂದ ವೈದ್ಯರು,

'ಆರಾಮವಾಗಿ ನಡೆಯಬೇಕು. ಧಾವಂತ ಇರಬಾರದು. ಹಾಗೇ ತೀರಾ ನಿಧಾನವಾಗಿಯೂ ನಡೆಯಬಾರದು. ಎಲ್ಲಿಗಾದರೂ ಹೋಗಬೇಕು ಎಂದು ಕೊಂಡಾಗ ಹೇಗೆ ನಡೆಯುತ್ತೀರೋ ಅಷ್ಟು ವೇಗ ಸಾಕು' ಎಂದೂ ಹೇಳಿದರು.

ತೆಳ್ಳಗಾಗಲು ನಾನಾ ಉಪಾಯ. ಒಂದೊಂದು ಕಾಲಕ್ಕೆ ಒಂದೊಂದು ಕ್ರೇಜ್ ಶುರುವಾಗುತ್ತದೆ. ಡಯಟಿಂಗ್ ಬಗ್ಗೆ ನಿತ್ಯ ನೂರೆಂಟು ಪುಸ್ತಕ, ಲೇಖನ. ಸಣ್ಣದೊಂದು ಔಷಧಿ ಸೇವನೆಯಿಂದ ತೆಳ್ಳಗಾಗುವ ಉಪಾಯದಿಂದ ಹಿಡಿದು ನಾನಾ ರೀತಿಯ ಕ್ವಾಕ್‌ಗಳು ಜಾಹೀರಾತು.

ಇಂಥದ್ದು ಯಾವುದೂ ಇಲ್ಲದೇ ತೀರಾ ಸರಳವಾದ ವಾಕಿಂಗ್‌ನಿಂದ ದೇಹದ ಆರೋಗ್ಯ ಕಾಪಾಡಿಕೊಳ್ಳುವುದು ಸಾಧ್ಯ ಎಂದು ಗೀತಾಗೆ ಮನವರಿಕೆ ಆಗಿದೆ. ಆದರೆ ವಾಕಿಂಗ್‌ಗೆ ಎಷ್ಟೆಲ್ಲ ಮಹತ್ವ ಇದೆ ಎಂಬುದು ಆಕೆಗೆ ಮನವರಿಕೆ ಆಗಿದ್ದು ತೀರಾ ಇತ್ತೀಚೆಗೆ.

ಡಯಾಬಿಟೀಸ್ ಮತ್ತು ಹೃದಯ ರೋಗಿಗಳಿಗೂ ಚಿಕಿತ್ಸೆಯ ಒಂದು ಭಾಗವಾಗಿ ವೈದ್ಯರು ವಾಕಿಂಗ್ ಮಾಡಲು ತಿಳಿಸುತ್ತಾರೆ ಎಂಬುದನ್ನು ಅರಿತ ಮೇಲೆ, ಆಕೆ ವಾಕಿಂಗ್ ಬಗ್ಗೆ ತೀರಾ ಗಂಭೀರವಾಗಿ ಆಲೋಚಿಸಲಾರಂಭಿಸಿದ್ದಾರೆ.

ನಿತ್ಯ ಬೆಳಿಗ್ಗೆಯೋ, ಸಂಜೆಯೋ ವಾಕಿಂಗ್ ಹೋಗುವಾಗ ನಾನಾ ದೃಶ್ಯ ಕಾಣುವುದುಂಟು. ಮನೆಯ ಹತ್ತಿರದ ಸ್ಯಾಂಕಿ ಕೆರೆಯ ದಂಡೆಯ ಮೇಲೆ ವಾಕಿಂಗ್ ಹೋಗುವಾಗ ಕೆರೆಯ ನೀರು, ಅಲ್ಲಿ ಬರುವ ನಾನಾ ಪಕ್ಷಿಗಳು. ಸಂಜೆಗಳಲ್ಲಾದರೆ ಒಮ್ಮೊಮ್ಮೆ ಬೋಟಿಂಗ್ ನಡೆಸುವವರ ಉಲ್ಲಾಸ ಎಲ್ಲ ಕಾಣುವಾಗ ಮನಸ್ಸು ತಲ್ಲೀನವಾಗುತ್ತದೆ. ಆಫೀಸು, ಮನೆಯ ಯಾವೊಂದು ಚಿಂತೆಯೂ ಕಾಡದಂತೆ ಮೈಸೋಕಿ ತಂಪೆರೆಯುವ ಗಾಳಿ ಉಲ್ಲಾಸ ತರುತ್ತದೆ.

ಈ ಮುಂಚೆ ಡಯಟಿಂಗ್ ಮಾಡುತ್ತ ಇದ್ದಾಗ ಅದೊಂದು ದೊಡ್ಡ ಹಿಂಸೆ. ಮಕ್ಕಳು ಜನ ಇರುವ ಮನೆಯಲ್ಲಿ ತನಗೇ ಪ್ರತ್ಯೇಕವಾಗಿ ಏನಾದರೂ ಮಾಡಿಕೊಳ್ಳಬೇಕು ಎಂದರೆ ಮುಜುಗರ. ಅವರೆಲ್ಲ ಸಂತೋಷದಿಂದ ಸವಿಯಾದ ಊಟ ಮಾಡುವಾಗ ತಾನು ಮೊಳಕೆ ಒಡೆದ ಕಾಳು, ಹಸಿ ತರಕಾರಿಗಳನ್ನು ಇಟ್ಟುಕೊಂಡು ತಿನ್ನಲಾರಂಭಿಸಿದರೆ ಉಳಿದವರು ಗೇಲಿ ಮಾಡುತ್ತಿದ್ದರು. ವಾರ ಕಳೆಯುವಾಗ ಅವರೇ ಕಾಳು, ತರಕಾರಿ ಹಸಿ ಹಸಿ ತಿನ್ನುವಾಗ ವಾಕರಿಕೆ ಬರುತ್ತಿತ್ತು. ಎಲ್ಲೋ ಒಂದು ದಿನ ಯಾರೋ ಮನೆಗೋ ಮದುವೆಗೋ ಹೋಗಿ, ಒತ್ತಾಯದಿಂದಲೇ ಊಟ ಮಾಡಿ ಬಂದರೆ ದಿನಗಟ್ಟಲೇ ಡಯಟಿಂಗ್ ತಪ್ಪಿದ ಬಗ್ಗೆ ಕೊರಗಾಗುತ್ತಿತ್ತು.

ಈಗ ಅಂಥದ್ದೇನಿಲ್ಲ. ಮನೆಯಲ್ಲಿ ಸಿಹಿ ಮಾಡಿದರೂ, ರುಚಿಗೆ ಅಂಥ ಒಂದಿಷ್ಟು ತಿನ್ನುವುದೆಷ್ಟೋ ಅಷ್ಟೇ. ಮೊದಲೆಲ್ಲ ದಿನಕ್ಕೆ ಹತ್ತುಬಾರಿ ಕಾಫಿ ಕುಡಿಯುತ್ತಿದ್ದುದು ನಿಜ. ಈಗ ಬೆಳಿಗ್ಗೆ ಎದ್ದಾಗ ಒಂದು ಸಲ ಅಷ್ಟೇ. ತಿಂಡಿಯ ಜೊತೆಗೆ ಒಂದು ಲೋಟಾ ಹಣ್ಣಿನ ರಸ, ಒಂದು ರೀತಿಯಲ್ಲಿ ತಾನಾಗಿಯೇ ಡಯಟಿಂಗ್ ಸಾಧ್ಯ ಆಗಿದೆ.

ಈಗೀಗ ವಾಕಿಂಗ್ ಬಗ್ಗೆ ಜಗತ್ತಿನ ಎಲ್ಲೆಡೆ ಆಸಕ್ತಿ ಮೂಡಿದೆ. ಇದು ಆರೋಗ್ಯ ಹಾಗೂ ಮೈ ಮನಸ್ಸುಗಳನ್ನು ಸರಿಯಾಗಿ ಇಟ್ಟುಕೊಳ್ಳಬಹುದಾದ ಸರಳ, ಸುಲಭ ಉಪಾಯ ಎಂಬುದು ಅರಿವಾಗಿದೆ. ಅದರಲ್ಲೂ ದಪ್ಪ ಮೈಯವರು ತಮ್ಮ ಬೊಜ್ಜು ಅಥವಾ ಹೆಚ್ಚುವರಿ ತೂಕ ಕರಗಿಸಿಕೊಳ್ಳಲು ಸುಲಭ ಸಾಧನ ಇದಾಗಿದೆ.

ಇವೆಲ್ಲಕ್ಕಿಂತ ಹೆಚ್ಚಾಗಿ, ಡಯಟಿಂಗ್ ಅಥವಾ ವ್ಯಾಯಾಮದಂಥ ಕ್ರಮಗಳನ್ನು ಕಟ್ಟುನಿಟ್ಟಾಗಿ ಸತತ ಅನುಸರಿಸಬೇಕು. ಅದನ್ನು ಬಿಟ್ಟ ಕೂಡಲೇ ಮತ್ತೆ ಬೊಜ್ಜು ಅಥವಾ ತೂಕ ಹೆಚ್ಚು ವೇಗವಾಗಿ ಬೆಳೆಯಲಾರಂಭಿಸುತ್ತದೆ. ವಾಕಿಂಗ್ ಮಾಡುವವರಲ್ಲಿ ಇದು ಅಪರೂಪ. ತೀವ್ರ ಸ್ವರೂಪದ ವ್ಯಾಯಾಮ ಅಥವಾ ಡಯಟಿಂಗ್‌ನಿಂದ ಕೆಲವೊಮ್ಮೆ ಗಂಭೀರ ಪರಿಣಾಮಗಳಾಗುವ ಸಾಧ್ಯತೆ ಇದೆ. ಡಯಟಿಂಗ್ ಮಾಡುವವರಲ್ಲಿ ಆಹಾರದ ಮೇಲೆ ಆಸಕ್ತಿ ಹೋಗಿ, ಅನೋರೆಕ್ಸಿಯಾ ಎಂಬ ರೋಗ ಕಾಣಿಸಿಕೊಳ್ಳುವ ಸಾಧ್ಯತೆ ಇದೆ. ವಾಕಿಂಗ್ ಮಾಡುವವರು ತಮ್ಮ ದಿನನಿತ್ಯದ ಎಂದಿನ ಜೀವನದ ಜೊತೆಗೇ ಇದನ್ನು ಅನುಸರಿಸಬಹುದು. ಅದಕ್ಕಾಗಿ ನಿರ್ದಿಷ್ಟ ಕಾಲ ಮೀಸಲಿರಿಸಬೇಕೆಂಬ ನಿಯಮ ಏನಿಲ್ಲ. ಮಾರ್ಕೆಟ್‌ಗೆ, ಆಫೀಸಿಗೆ, ಇನ್ಯಾರದೋ ಮನೆಗೆ ನಡೆದು ಹೋಗುವ ಅಭ್ಯಾಸ ಮಾಡಿಕೊಂಡರೂ ಸಾಕು. ಹೀಗಾಗಿಯೇ ಈಗೀಗ ವಾಕಿಂಗ್ ಕೇವಲ ಬೊಜ್ಜು ಕರಗಿಸುವ ಕ್ರಮ ಮಾತ್ರ ಅಲ್ಲ. ಅದೊಂದು ಜೀವನ ಶೈಲಿಯಾಗಿಯೇ ಮೂಡುತ್ತಿದೆ.

■ ಲಕ್ಷ್ಮೀ ಕೊಡದಗುಡ್ಡ



# ನೀವು 'ಸ್ವಂತ ಮನೆ' ಕನಸು ಕಾಣುತ್ತಿದ್ದೀರಾ?

ಸ್ವಂತ 'ಮನೆ' ಹೊಂದ ಬಯಸುವವರು ತಿಳಿದಿರಲೇಬೇಕಾದ ಸಂಪೂರ್ಣ ವಿವರಗಳನ್ನು 'ಬದುಕು' ಒದಗಿಸುತ್ತದೆ. ಸ್ವಂತ ಮನೆ ಕಟ್ಟುವವರಿಗಾಗಿಯೇ ''ಸ್ವಂತ ಮನೆ'' ಹೆಸರಿನ ವರ್ಣರಂಜಿತ ಲೇಖನ ಮಾಲೆ ಆರಂಭಿಸುತ್ತಿದ್ದೇವೆ. ಈ ವಿನೂತನ ಲೇಖನಮಾಲೆಯಲ್ಲಿ ಈ ಕೆಳಗಿನ ವಿಷಯಗಳಿರುತ್ತವೆ.

- ನಿವೇಶನ ಆಯ್ಕೆ
- ಬ್ಯಾಂಕ್ ಸಾಲ ಸೌಲಭ್ಯ
- ಮನೆ ಅಂದಕ್ಕಾಗಿ ಸರಳ ಉಪಾಯಗಳು
- ನಿವೇಶನ ನೋಂದಾವಣೆ
- ಕಾಂಟ್ರ್ಯಾಕ್ಟರ್ ಜೊತೆಗಿನ ವ್ಯವಹಾರ
- ಕಟ್ಟಡ ಸಾಮಗ್ರಿಗಳ ಗುಣ ಪರೀಕ್ಷೆ
- ಕಡಿಮೆ ವೆಚ್ಚದ ಮನೆ ನಿರ್ಮಾಣ....

ಇತ್ಯಾದಿ ಪ್ರತಿಯೊಬ್ಬರೂ ತಿಳಿದಿರಬೇಕಾದ ಸರಳ ಮಾಹಿತಿಗಳು

## 'ಬಿಸಿಲ ಬದುಕು' ಲೇಖನಮಾಲೆ ಆರಂಭ !

ಪ್ರಕಟಣೆಯ ದಿನಾಂಕ ನಿರೀಕ್ಷಿಸಿ

## ನಿಮ್ಮ ಪ್ರತಿ ಕಾಯ್ದಿರಿಸಲು ಮರೆಯಬೇಡಿ !

**ಮನೆ ಕಟ್ಟುವ ವಿಷಯಕ್ಕೆ ಸಂಬಂಧಿಸಿದಂತೆ ನಿಮ್ಮ ಪ್ರಶ್ನೆ, ಅನುಮಾನ, ಸಂದೇಹಗಳಿದ್ದರೆ ಈ ವಿಳಾಸಕ್ಕೆ ಬರೆಯಿರಿ ತಜ್ಞರ ಮೂಲಕ ಉತ್ತರ ಒದಗಿಸುತ್ತೇವೆ.**

**ವಿಳಾಸ : ಬಿಸಿಲ ಬದುಕು, 552, 15ನೇ ಮೇನ್, 3ನೇ ಸ್ಟೇಜ್, 4ನೇ ಬ್ಲಾಕ್, ವಾಟರ್ ಟ್ಯಾಂಕ್ ರೋಡ್, ಬಸವೇಶ್ವರನಗರ, ಬೆಂಗಳೂರು - 560 079 ಫೋನ್ : 3227810,**

# ಮೆಲುಕಿನ ಸವಿ



ಬೆಳಗು ಮಧ್ಯಾಹ್ನ ಸಂಜೆ
ಯಾವಾಗೆಂದ್ರೆ ಆವಾಗ
ನಿನ್ನ ಧ್ವನಿಯನ್ನು ಕೇಳಿದಾಗಲೆಲ್ಲ
ಅಂದೆಂದೋ ನೋಡಿದ
ನಿನ್ನ ಮುಖ ಕಣ್ಣಿಗೆ ಕಟ್ಟುತ್ತದೆ.

ಕರಿಬಿಳಿ ಮೋಡಗಳು ಬಂದಾಗಲೆಲ್ಲ
ಅದೂ
ಮುಚ್ಚಿ ಹೋಗುತ್ತದೆ.

ಆದರೂ
ನಿರಾಳ ಆಕಾಶದ ಕಿವಿ ಹಿಂಡಿದಾಗಲೆಲ್ಲ
ಆ ನಿನ್ನ ಧ್ವನಿ
ಕಿವಿಗೆ ಬೀಳುತ್ತದೆ.
ಹೀಗೆ
ಜಿದ್ದಾಗಲೆಲ್ಲ ಎದ್ದೆದ್ದು
ಮುಖಾಮುಖಿಯಾಗಿ
ಮಾತಾಡಬೇಕೆನ್ನುತ್ತೇನೆ

ಆ ನಿನ್ನ ಧ್ವನಿ
ಅದೃಶ್ಯ ಆಕಾಶವಾಣಿಯೆಂದು
ನೆನಪಾದೊಡನೆ
ಮೂಕನಾಗುತ್ತೇನೆ.

ಇಂಥ ನಿರಾಕಾರ ಧ್ವನಿಗಿಂತ
ನಿನ್ನ ನೆನಪಿನ
ಕೂರ್ಪಿನ ಧ್ವನಿಯೇ
ಲೇಸೆನ್ನುತ್ತೇನೆ.
ಕಣ್ಣಿಗೇ ಕಾಣದ
ಕಿವಿಗೇ ಕೇಳದ
ಒಟ್ಟು ಪಂಚೇಂದ್ರಿಯಗಳಿಗೇ
ನಿಲುಕದ ನೀನು -
ನಿನ್ನ
ನೆನಪಿನ ಮೆಲುಕನ್ನೇ
ಸವಿಯೆಂದು
ನಾನು -
ಕೈಲಾಗದೆ
ಹಿರಿ ಹಿರಿ ಹಿಗ್ಗಿದ್ದೇನೆ.

■ ವಸಂತ ಕುಷ್ಟಗಿ

# ಹೊಸ ಪುಸ್ತಕ



## ಸ್ನೇಹ ಸಮ್ಮಿಲನ

ಸಂ: ಬಿ.ಹನುಮಂತ ಭಟ್
ಪ್ರ: ಓಂ ಪ್ರಕಾಶನ
ಕಾರ್‌ಸ್ಟ್ರೀಟ್, ಹೊಸಪೇಟೆ- 583201
ಪುಟ : 138, ಬೆಲೆ: ರೂ. 30/-



## ಶರಣರ ವಚನಗಳು

ಸಂ :ಶ್ರೀಮತಿ ಅಂಜನಾ ಕೃಷ್ಣಪ್ಪ
ಪ್ರ: ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು
ಕೊಪ್ಪಳ ಜಿಲ್ಲೆ.
ಪುಟ: 152, ಬೆಲೆ: ರೂ. 100/-



## ಹೊಸ ಹುಡುಗನ ಹಾಡುಗಳು

ಲೇ: ಯು.ರಾಮು ಸಿರಿಗೆರೆ
ಪ್ರ: ಸಿರಿ ಪ್ರಕಾಶನ
ರೂಪ ಹೋಟೆಲ್, ಸಿರಿಗೆರೆ - 577541.
ಪುಟ: 64, ಬೆಲೆ : ರೂ. 30/-




## ನನ್ನ ಪೆದ್ದಿ

ಸಂ :ಎನ್.ಟಿ. ಎರ್ರಿಸ್ವಾಮಿ
ಪ್ರ: ಸೌಮ್ಯ ಪ್ರಕಾಶನ,
ಚನ್ನರಾಯಪಟ್ಟಣ, ಹಾಸನ ಜಿಲ್ಲೆ
ಪುಟ: 68, ಬೆಲೆ : ರೂ. 25/-



ಮಾಡೆಲ್ ಒಬ್ಬಳ ವಜ್ರದ ಮುಸುಕು. ಇದರ ಬೆಲೆ ಕೇವಲ 275 ಸಾವಿರ ಡಾಲರ್.




**ಮಹಾತಾಯಿ :** ಭಾರತದಲ್ಲಿ ಜನ ಸಂಖ್ಯೆ ಶತಕೋಟಿ ದಾಟಿದೆ. ಇದಕ್ಕೆ ಹೆಮ್ಮೆ ಪಡಬೇಕೋ, ನಾಚಿಕೆಯಿಂದ ತಲೆ ತಗ್ಗಿಸಬೇಕೋ ಎಂದು ಧುರೀಣರು ಒದ್ದಾಡುತ್ತಿದ್ದಾರೆ.

ಬ್ರಿಟನ್ನಿನದು ಇನ್ನೊಂದು ವಿಚಿತ್ರ ಕತೆ. ಅಲ್ಲೊಬ್ಬ ಇಪ್ಪತ್ತಾರು ವರ್ಷದ ಹೆಂಗಸು 'ಹೆರಿಗೆ ಯಂತ್ರ' ಎಂದು ಹೆಸರಾಗಿ ಅಧಿಕಾರಿಗಳಿಗೆ ತಲೆನೋವಾಗಿದ್ದಾಳೆ. ಈಗಾಗಲೇ ಏಳು ಮಕ್ಕಳನ್ನು ಹೆತ್ತಿರುವ ಆಕೆ ಎಂಟನೇ ಬಾರಿಗೆ ಗರ್ಭಿಣಿ. ಅವಳಿಗೀಗ ಎರಡೂವರೆ ವರ್ಷ ಜೈಲು ಶಿಕ್ಷೆ ವಿಧಿಸಲಾಗಿದೆ. ಕಾರಣ ಇಷ್ಟೆಲ್ಲ ಮಕ್ಕಳನ್ನು ಹೆತ್ತಳು ಎಂದಲ್ಲ. ಹೆತ್ತ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ ಎಂದು ದೂರು.

**ಬೆತ್ತಲಾದವರು :** ಆಸ್ಟ್ರಿಯಾದ ರಾಜಧಾನಿ ವಿಯೆನ್ನಾದಲ್ಲಿ ಹೊಸ ಪ್ರಯೋಗ ನಡೆಯಿತು. ಒಳ ಉಡುಪು ಮಾರುವ ಅಂಗಡಿಯೊಂದು ಪುಕ್ಕಟೆ ಬೆತ್ತಲೆ ಪ್ರದರ್ಶನ ನಡೆಸಿತು. ಇಲ್ಲಿನ ಮೂವರು ಮಹಿಳಾ ಹಾಗೂ ಒಬ್ಬ ಪುರುಷ ರೂಪದರ್ಶಿಗಳು ಜನಕ್ಕೆ ಕಾಣುವಂತೆ ಗಾಜಿನ ಕಿಟಕಿಯ ಹಿಂದೆ ನಿಂತು ತಮ್ಮ ಒಳ ಉಡುಪು ಬದಲಾಯಿಸಲು ತೊಡಗಿದರು. ಗಂಟೆಗೊಮ್ಮೆ ನಡೆಯುತ್ತಿದ್ದ ಈ ಬೆತ್ತಲೆ ಪ್ರದರ್ಶನ ನಡೆಸಲು ಜನ ಕಿಕ್ಕಿರಿದು ಸೇರಿದರು. ಇದನ್ನರಿತ ಕಿಲಾಡಿಯೊಬ್ಬ ಅಲ್ಲೇ ಒಂದು ಸಂಚಾರಿ ಹೋಟೆಲ್ ಆರಂಭಿಸಿ ಲಾಭ ಮಾಡಿಕೊಂಡ. ಅಂಗಡಿಯ ವರಿಗೇನಾದರೂ ಲಾಭವಾಯಿತೆ? ಎಂಬುದು ಇನ್ನೂ ತಿಳಿದಿಲ್ಲ.

**ಪ್ರೀತಿಯ ತೇವ :** ಟೆಲ್ ಅವೀವ್‌ನ ಜೋಡಿಯೊಂದು ಇತ್ತೀಚೆಗೆ ವಿಚಿತ್ರ ಅನುಭವ ಪಡೆಯಿತು. ಇಲ್ಲಿನ ಯಕಾನ್ ನದಿಯ ದಂಡೆಯಲ್ಲಿ ಕಾರು ನಿಲ್ಲಿಸಿ, ಪ್ರೀತಿಯಲ್ಲಿ ತೊಡಗಿದ್ದ ಇವರು ಇದ್ದಕ್ಕಿದ್ದ ಹಾಗೆ ಒದ್ದೊದ್ದೆ ಆಗತೊಡಗಿದರು. ನೋಡಿದರೆ ಕಾರು ನೀರಲ್ಲಿ ಮುಳುಗಿತ್ತು.

ಚೇತರಿಸಿಕೊಂಡು ಬೆತ್ತಲಾಗಿಯೇ ಎದ್ದು ಬಂದ ಈ ಜೋಡಿಗೆ ಪಿಕ್ಕ್‌ಗೆಂದು ಬಂದಿದ್ದ ಜನ ಬಟ್ಟೆ, ಮೊಬೈಲ್ ಫೋನ್ ಒದಗಿಸಿದರು.

ಆದದ್ದು ಇಷ್ಟು. ಇಬ್ಬರೂ ಪ್ರೀತಿಯ ಭರದಲ್ಲಿ ಕಾರಿನ ಕ್ಲಚ್ ಒತ್ತಿದ್ದರು. ಅದು ಸೀದಾ ಇಳಿಜಾರು ದಂಡೆಯಲ್ಲಿ ನಿಧಾನಕ್ಕೆ ಸಾಗಿ ಗಲೀಜು ನೀರಿನ ನದಿಯಲ್ಲಿ ಮುಳುಗಿತು.



ಭಾರೀ ಕ್ರಿಕೆಟ್ ಹಗರಣದ ನಡುವೆಯೇ ಸಚಿನ್ ಮಗಳು ಸಾರಾ ರಣಜಿ ಫೈನಲ್ಸ್ ಖುಷಿಯಿಂದ ವೀಕ್ಷಿಸುತ್ತಿದ್ದಾಳೆ. ಜೊತೆಗೆ ತಾಯಿ ಅಂಜಲಿ ಇದ್ದಾರೆ.

**ಹೆಂಡತಿಯನ್ನು ಹೊಡೆಯುವುದು ಹೇಗೆ? :** ತಮ್ಮ ಮೇಲೆ ಹೆಂಡತಿ ನಡೆಸುತ್ತಿರುವ ದಾಳಿಯ ಕಾಟ ತಾಳಲಾರದೆ ಗಂಡಸರು ಸಂಘ ಕಟ್ಟಿಕೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಇದೇನಿದು ವಿಚಿತ್ರ ತಲೆಬರಹ ಅಂದುಕೊಳ್ಳುತ್ತೀರಾ? ಪ್ರತಿಷ್ಠಿತ 'ಪ್ಲೇಬಾಯ್' ಪತ್ರಿಕೆಯಲ್ಲಿ ಪೆಟ್ಟಿನ ಗುರುತು ಮೂಡದಂತೆ ಹೆಂಡತಿಯನ್ನು ಬಡಿಯುವುದು ಹೇಗೆ? ಎಂಬ ಲೇಖನ ಇಟಾಲಿಯನ್ ಆವೃತ್ತಿಯಲ್ಲಿ ಪ್ರಕಟವಾಯಿತು. ತಕ್ಷಣವೇ ಹೆಂಗಸರೆಲ್ಲ ಸಜ್ಜಾಗಿ ಪ್ರತಿಭಟನೆಗೆ ತೊಡಗಿದರು.

ಇದು ಎಷ್ಟು ತೀವ್ರ ಆಯಿತೆಂದರೆ ಪತ್ರಿಕೆಯ ಕೇಂದ್ರ ಆವೃತ್ತಿಯ ನಿರ್ದೇಶಕ ಡೇವಿಡ್ ವಾಕರ್ ಖುದ್ದಾಗಿ ಇಟಲಿಗೆ ಬಂದು ಕ್ಷಮೆ ಯಾಚಿಸಬೇಕಾಯಿತು.

**ಹುಡುಗರಿಗಿಲ್ಲ ಕಷ್ಟ :** ಸೌದಿ ಅರೇಬಿಯಾದ ಹುಡುಗರು ಇನ್ನು ಪೋಲಿ ಅಲೆಯುವಂತಿಲ್ಲ. ಅವರೇನಾದರೂ ಹುಡುಗಿಯರ ಶಾಲೆ, ಕಾಲೇಜುಗಳ ಹತ್ತಿರ ಸುಳಿದಾಡಿದರೆ ಪೊಲೀಸರು ಹಿಡಿದು ಬಹಿರಂಗ ಛಡಿ ಏಟು ನೀಡುತ್ತಾರೆ. ಜೈಲಿಗೂ ಕಳುಹಿಸಬಹುದು.

ಮುಸ್ಲಿಂ ರಾಜ್ಯದ ಸಂರಕ್ಷಣೆಗಾಗಿ ಇಂಥ ಕ್ರಮ ಅಗತ್ಯ ಎಂದು ಅಲ್ಲಿನ ರಾಜಕುಮಾರ ಮದೀನಾ ಆದೇಶ ಹೊರಡಿಸಿದ್ದಾನೆ. ಪೋಲಿ ಅಲೆಯುವ ಹುಡುಗರನ್ನು ಪತ್ತೆ ಹಚ್ಚಿ ಶಿಕ್ಷೆ ವಿಧಿಸಲು ಅಲ್ಲೊಂದು ತಂಡವನ್ನೇ ರಚಿಸಲಾಗಿದೆ. ■



ರಾಜಾಸ್ಥಾನದಲ್ಲಿ ಬರದ ಬೇಗೆಯ ನಡುವೆ ಮದುವೆಗಳಿಗೆ ಬರವಿಲ್ಲ. ಆರು ವರ್ಷದ ರಾಧಾ ಮದುವೆಯಾಗಲು ತಕರಾರು ಮಾಡಿ ಹಸೆ ಮಣೆಯಲ್ಲೇ ಅಳುತ್ತಿದ್ದಾಳೆ



# ಸುಂದರಿಯುರ ಬೀಡಲ್ಲಿ ಕೋಲಾಹಲ !

**ಸೌಂದರ್ಯ, ಅದರ ಕಲ್ಪನೆಗಳ ವ್ಯಾಖ್ಯೆ ಅನೇಕ. ಭುವನ ಸುಂದರಿ ಸ್ಪರ್ಧೆ ನಡೆದ ಸೈಪ್ರಸ್; ಗ್ರೀಕರ ಸೌಂದರ್ಯ ದೇವತೆ ಅಫ್ರೋದಿತೆಯ ತವರು. ಅಂಥ ನೆಲದಲ್ಲಿ ಸೌಂದರ್ಯದ ಅಧಿದೇವತೆ ಎಂಬ ಬಿರುದು ಗಳಿಸಿಕೊಂಡ ಬೆಂಗಳೂರಿನ ಹುಡುಗಿಯ ಬಗ್ಗೆ ಇಲ್ಲೆಲ್ಲಾ ಹೆಮ್ಮೆ. ಎಲ್ಲರ ಅಭಿನಂದನೆ.**

ಇಪ್ಪತ್ತೊಂದರ ಭುವನ ಸುಂದರಿ ಲಾರಾ, ದಿಗ್ವಿಜಯದ ಕಿರೀಟ ತೊಟ್ಟ ಮರುಗಳಿಗೆ ಪತ್ರಿಕೆಯವರು ಕೇಳಿದ ಪ್ರಶ್ನೆ ''ಈಗ ನೀವೇನು ಮಾಡಲು ನಿರ್ಧರಿಸಿದ್ದೀರ?''

''ಬೆಳಿಗ್ಗೆಯಿಂದ ಏನೆಂದರೆ ಏನೂ ತಿಂದಿಲ್ಲ. ಮೊದಲು ತಿಂಡಿ ತಿನ್ನುತ್ತೇನೆ. ಆನಂತರ ಒಂದಿಷ್ಟು ಸುಖವಾದ ನಿದ್ದೆ ಮಾಡಬೇಕಿದೆ.''

ಆಗ ಸೈಪ್ರಸ್‌ನ ರಾಜಧಾನಿ ನಿಕೋಸಿಯಾದಲ್ಲಿ ರಾತ್ರಿ ಕಳೆದು ಬೆಳಕು ಮೂಡುತ್ತಿತ್ತು. ಆಕೆಯ ತಂದೆ ಲಲಿತ್ ದತ್ತಾ ಬೆಂಗಳೂರಿನ ಇನ್ನೊಬ್ಬ ಮಗಳು ಸಬ್ರೀನಾಗೆ ಫೋನು ಮಾಡಿ '' ನನ್ನ ಮಗು ಬೆಳಿಗ್ಗೆಯಿಂದ ಹಸಿದು ಕೊಂಡಿದೆ. ಏನೇನೂ ತಿಂದಿಲ್ಲ'' ಎಂದು ಕಳವಳದಿಂದ ಹೇಳುತ್ತಾ ಇದ್ದರು.

ಸೌಂದರ್ಯ, ಅದರ ಕಲ್ಪನೆಗಳ ವ್ಯಾಖ್ಯೆ ಅನೇಕ. ಭುವನ ಸುಂದರಿ ಸ್ಪರ್ಧೆ ನಡೆದ ಸೈಪ್ರಸ್; ಗ್ರೀಕರ ಸೌಂದರ್ಯ ದೇವತೆ ಅಫ್ರೋದಿತೆಯ ತವರು. ಅಂಥ ನೆಲದಲ್ಲಿ ಸೌಂದರ್ಯದ ಅಧಿದೇವತೆ ಎಂಬ ಬಿರುದು ಗಳಿಸಿಕೊಂಡ ಬೆಂಗಳೂರಿನ ಹುಡುಗಿಯ ಬಗ್ಗೆ ಇಲ್ಲೆಲ್ಲಾ ಹೆಮ್ಮೆ. ಎಲ್ಲರ ಅಭಿನಂದನೆ.

ಈಚಿನ ದಿನಗಳಲ್ಲಿ ಭಾರತೀಯ ಹುಡುಗಿಯರು ಮತ್ತೆ ಮತ್ತೆ ಇಂಥ ಸ್ಪರ್ಧೆಗಳಲ್ಲಿ ಗೆಲ್ಲುತ್ತಾ ಇರುವುದಕ್ಕೆ ಹೆಮ್ಮೆ ಇರುವುದು ನಿಜ. ಆದರೆ ಇಂಥ ಗೆಲುವಿನ ಹಿಂದೆಯೇ ಅಂತಾರಾಷ್ಟ್ರೀಯ ಸಂಸ್ಥೆಗಳ ಹುನ್ನಾರ ಇರಲೇಬೇಕೆಂಬ ಸಣ್ಣ ಅನುಮಾನ ಕೂಡ ಇದೆ. ಆದರೆ ಇಂಥ ಸ್ಪರ್ಧೆ, ಅದರಲ್ಲಿ ನಮ್ಮವರ ಗೆಲುವು ಆದಾಗೆಲ್ಲ ಒಂದು ಸಣ್ಣ ಸಂಭ್ರಮಕ್ಕೆ ಕಾರಣವಾಗುವುದಂತೂ ಸತ್ಯ.

ದತ್ತಾ ಅವರದು ಮಧ್ಯಮ ವರ್ಗದ ಕುಟುಂಬ. ಲಾರಾನ ತಂದೆ ಲಲಿತ್ ದತ್ತಾ ಹುಟ್ಟಿನಿಂದ ಪಂಜಾಬಿ. ಮದುವೆ ಆದದ್ದು ಯೂರೋಪಿಯನ್ ಮಹಿಳೆ ಜೆನಿಫರ್ ಅವರನ್ನು.ಆಕೆ ತುಂಬಾ ಹಿಂದೆ 'ಮಿಸ್ ಮದ್ರಾಸ್' ಆಗಿ ಆಯ್ಕೆ ಆಗಿದ್ದವರು. ಮೂರನೆಯ ಮಗು ಹುಟ್ಟಿದಾಗ ಡಾ. ಜಿವಾಗೋ ಕಾದಂಬರಿಯಲ್ಲಿ ಬರುವ ನಾಯಕಿ 'ಲಾರಾ'ನ ಹೆಸರನ್ನು ಆಕೆ ಮಗುವಿಗಿಟ್ಟರು. ಕಮ್ಯುನಿಸ್ಟ್ ಕ್ರಾಂತಿಯ ನಡುವೆ ನಲುಗುತ್ತಿದ್ದ ವ್ಯಕ್ತಿಗತ ಸ್ವಾತಂತ್ರ್ಯದ ದ್ಯೋತಕ ಡಾ. ಜಿವಾಗೋ. ಆತನಿಗೆ ಒತ್ತಾಸೆಯಾಗಿ ನಿಂತವಳು ಪ್ರೇಯಸಿ ಲಾರಾ. ಸಿನಿಮಾ ತೆರೆಗೆ ಬಂದಾಗ ನಾಯಕ ಪಾತ್ರವನ್ನು ಹಾಲಿವುಡ್‌ನ ಖ್ಯಾತ ಈಜಿಪ್ಷಿಯನ್ ನಟ ಓಮರ್ ಶರೀಫ್ ವಹಿಸಿದ್ದರೆ, ಲಾರಾ ಪಾತ್ರವನ್ನು ಜ್ಯೂಲಿ ಕ್ರಿಸ್ಟಿ ನಿರ್ವಹಿಸಿದ್ದಳು. ಸೌಂದರ್ಯ ಮತ್ತು ನವಿರು ಭಾವನೆಗಳ ಸಾಕಾರದಂತಿದ್ದ ಜ್ಯೂಲಿಯನ್ನು ಮೆಚ್ಚಿಯೇ ಜೆನಿಫರ್ ಮಗುವಿಗೆ ಲಾರಾ ಎಂದು ಹೆಸರಿಟ್ಟಿದ್ದು ಸಹಜವೇ ಇತ್ತು.

ಆ ಹುಡುಗಿ ಮುಂದೊಮ್ಮೆ ತಾನು ವಿಶ್ವದ ಅಗ್ರಗಣ್ಯ ಸುಂದರಿ ಆಗುತ್ತೇನೆ ಎಂಬ ನಂಬಿಕೆಯಿಂದಲೇ ಬೆಳೆದಳು. ಶಾಲೆಯಲ್ಲಿ, ತಾನು ಓದಿದ ಬೆಂಗಳೂರಿನ ಮೌಂಟ್ ಕಾರ್ಮೆಲ್ ಮತ್ತು ಮುಂಬಯಿಯ ಸೇಂಟ್ ಕ್ಸೇವಿಯರ್ ಕಾಲೇಜಲ್ಲಿ ತನ್ನ ಬೆಡಗಿನಿಂದ ಸಾಕಷ್ಟು ಅಭಿಮಾನಿಗಳನ್ನು ಪಡೆದಿದ್ದಳು. ಮಿಸ್ ಇಂಟರ್‌ನ್ಯಾಷನಲ್ ಹಾಗೂ ಮಿಸ್ ಇಂಡಿಯಾ ಪ್ರಶಸ್ತಿಗಳನ್ನು ಗೆದ್ದುಕೊಂಡ ಮೇಲೆ, ಬೆಂಗಳೂರಿಗಿಂತ ಹೆಚ್ಚಿನ ಅವಕಾಶಗಳಿರುವ ಮುಂಬಯಿಗೆ ತೆರಳಿದಳು. ರೂಪದರ್ಶಿ ಆದಳು. ಬಿ.ಕಾಂ ತೃತೀಯ ವರ್ಷದ ವಿದ್ಯಾರ್ಥಿ ಆಗಿದ್ದುಕೊಂಡೇ 'ಭುವನಸುಂದರಿ'ಯ ಕಿರೀಟ ತೊಟ್ಟುಕೊಂಡಳು. ಇಂಥ ಗೆಲುವಿನ ನಂತರ ಬೇರೆಲ್ಲ ಬಯಸುವ ಹಾಗೆ ಸಿನಿಮಾಕ್ಕೆ ಲಗ್ಗೆ ಇಡುವ ಮನಸ್ಸೂ ಆಕೆಗಿಲ್ಲ. ಹಾಗೆ ಮನಸ್ಸು ಮಾಡಿದ್ದರೆ ಈ ಹೊತ್ತಿಗಾಗಲೇ ವಿನೋದ್

ಭೋಪ್ರಾನ 'ಹಿಮಾಲಯ ಪುತ್ರ'ದಲ್ಲಿ ಅಕ್ಷಯ ಖನ್ನಾ ಹಾಗೂ ಅಮೀರ್‌ಖಾನ್‌ನ 'ಲಗನ್'ನಲ್ಲಿ ನಾಯಕಿ ಆಗಿ ಬಿಡುತ್ತಾ ಇದ್ದಳು. ಬೆಡಗಿಂದ ದೂರ ಉಳಿದು 'ಪತ್ರಿಕೋದ್ಯಮ' ಆರಿಸಿಕೊಳ್ಳುವ ಇಂಗಿತ ಆಕೆ ವ್ಯಕ್ತಪಡಿಸಿದ್ದಾಳೆ.

ಇದೆಲ್ಲ ಸರಿ. ಇಂಥ ಸ್ಪರ್ಧೆಗಳ ಬಗ್ಗೆಯೇ ನಮ್ಮ ನಿಲುವುಗಳು ಬದಲಾಗುತ್ತಾ ಇವೆ. ಮೊದಲಿದ್ದ ಆಕರ್ಷಣೆ, ಬೆರಗು ಇವುಗಳ ಬಗೆಗೆ ಉಳಿದಿಲ್ಲ. ಕಳೆದ ಸಾಲಿನ 'ಭುವನ ಸುಂದರಿ' ಪ್ರಶಸ್ತಿ ಪಡೆದಿದ್ದಾಕೆ ಆ ಸಮಯದಲ್ಲಿ ಗರ್ಭಿಣಿ ಆಗಿದ್ದಳೆಂಬ ಕಾರಣಕ್ಕೆ ಪ್ರಶಸ್ತಿಯನ್ನು ವಾಪಸ್ ಪಡೆದುಕೊಂಡ ಘಟನೆ ನಡೆದ ಮೇಲೆ, ಇಂಥ ಸ್ಪರ್ಧೆಗಳ ಬಗ್ಗೆ ಮಹಿಳೆಯರೇ ಅಪಸ್ವರ ಎತ್ತತೊಡಗಿದ್ದಾರೆ. ಈ ಸ್ಪರ್ಧೆಗಳಲ್ಲಿ ಅನುಸರಿಸುವ ಮಾನದಂಡ, ಆಯ್ಕೆಯ ಕ್ರಮಗಳ ಬಗ್ಗೆಯೇ ತಕರಾರು ಇದೆ. ಹೆಣ್ಣಿನ ಅಂಗಾಂಗಗಳ ಪ್ರಮಾಣ, ಅವುಗಳ ನಿರ್ದಿಷ್ಟ ಸ್ವರೂಪ ಇಲ್ಲಿ ಮುಖ್ಯ ಆಗುತ್ತವೆ ಎಂಬ ಕಾರಣಕ್ಕೇ ಮಹಿಳೆಯರು ಮುನಿದಿದ್ದಾರೆ. ಹೆಣ್ಣಿನ ಸೌಂದರ್ಯಕ್ಕೆ ದೇಹವೇ ಮುಖ್ಯ ಎನ್ನುವುದಾದರೆ, ಇದು 'ಸೆಕ್ಸ್' ಪ್ರೇರಿತ ವ್ಯಾಪಾರವಷ್ಟೇ ಎಂಬುದು ಅವರ ವಾದ.



ಯೂರೋಪ್ ಮುಂತಾದೆಡೆ ಟ್ಯಾಬ್ಲಾಯ್ಡ್ ಪತ್ರಿಕೆಗಳ ಮೂರನೇ ಪುಟದಲ್ಲಿ ಆಕರ್ಷಕ ಭಂಗಿಯ ಮಹಿಳೆಯರ ಬೆತ್ತಲೆ ಚಿತ್ರಗಳು ಇರುತ್ತವೆ. ಈ ಪುಟಕ್ಕೆ ಚಿತ್ರ ಆಯ್ಕೆ ಮಾಡುವಾಗಲೂ ಇಂಥದ್ದೇ ದೇಹದ ಮಾನದಂಡ ಮುಖ್ಯ. ಇಲ್ಲಿ ಮಹಿಳೆಯರು ಬೆತ್ತಲಾಗಿ ಕ್ಯಾಮರಾಕ್ಕೆ ತೆರೆದುಕೊಳ್ಳುತ್ತಾರೆ. ಅಲ್ಲಿ ಬಟ್ಟೆ ಧರಿಸಿ ಅದೇ ಕೆಲಸ ಮಾಡುತ್ತಾರೆ ಎಂಬುದು ಬಿಟ್ಟರೆ, ಎರಡರ ನಡುವೆ ಅಂಥ ವ್ಯತ್ಯಾಸ ಏನಿಲ್ಲ ಎನ್ನುತ್ತಾರೆ ಈ ಜನ.

ಈ ಕಾರಣಕ್ಕೆ ಏನೋ! ಯೂರೋಪ್ ಮತ್ತು ಅಮೇರಿಕಾದ ಪ್ರತಿಷ್ಠಿತ ಛಾನೆಲ್‌ಗಳು ಸೌಂದರ್ಯ ಸ್ಪರ್ಧೆಯಿಂದ ಕಾರ್ಯಕ್ರಮಗಳನ್ನು ಬಿತ್ತರಿಸುವ ಗೋಜಿಗೇ ಹೋಗುವುದಿಲ್ಲ. ಈ ಬಾರಿಯ ಭುವನ ಸುಂದರಿ ಸ್ಪರ್ಧೆಯ ನೇರ ಪ್ರಸಾರ ವಹಿಸಿಕೊಂಡಿದ್ದು ಬ್ರಿಟನ್ನಿನ ಛಾನೆಲ್ ಫೈವ್. ಅದೊಂದು ಅಗ್ಗದ ಮನರಂಜನಾ ಛಾನೆಲ್. ಅಮೇರಿಕಾದ 'ಬಿ' ದರ್ಜೆಯ ಸಿನಿಮಾ ಹಾಗೂ ಕಾರ್ಯಕ್ರಮಗಳನ್ನು ಚಿತ್ರಿಸುವುದೇ ಅದರ ಕೆಲಸ. ಇಂಥ ಛಾನೆಲ್ ನೋಡುವವರೇ ಯೂರೋಪ್‌ನಲ್ಲಿ ವಿರಳ. ಅಮೆರಿಕನ್ನರಿಗಂತೂ ಇಂಥ ಸ್ಪರ್ಧೆಗಳೆಂದರೆ ಒಂದು 'ಜೋಕ್' ಇದ್ದ ಹಾಗೆ.

[illegible] ಬಗ್ಗೆಯೇ [illegible] ಸ್ಪರ್ಧೆಗೆ ಬಂದ ಹುಡುಗಿಯರನ್ನು ಇಂಥದ್ದೇ ವಿಚಾರಗಳ ಬಗ್ಗೆ ಪ್ರಶ್ನಿಸಿ ಅದರಿಂದ ಚಿತ್ರ ವಿಚಿತ್ರ ಉತ್ತರ ಪಡೆಯುವುದು 'ಜೋಕ್' ಅಲ್ಲದೇ ಇನ್ನೇನು? ಎಂದು ಅವರೆಲ್ಲ ಪ್ರಶ್ನಿಸುತ್ತಾರೆ.

ಕಳೆದ ಕೆಲವು ವರ್ಷಗಳಿಂದ ಇಂಥ ಸೌಂದರ್ಯ ಸ್ಪರ್ಧೆಗಳ ವಿರುದ್ಧ ಮಹಿಳೆಯರೇ ಸಂಘಟಿತರಾಗಿ ಪ್ರತಿಭಟನೆ ನಡೆಸುತ್ತಾ ಬಂದಿದ್ದಾರೆ. ಸೌಂದರ್ಯ ಪ್ರಸಾದನ ತಯಾರಿಕಾ ಕಂಪೆನಿಗಳು ತಮ್ಮ ಮಾರುಕಟ್ಟೆ ವಿಸ್ತರಿಸುವ ಹುನ್ನಾರವಾಗಿ ಇಂಥ ಸ್ಪರ್ಧೆ ನಡೆಸುತ್ತಿದ್ದು, ತೃತೀಯ ವಿಶ್ವದ ಹುಡುಗಿಯರಿಗೆ 'ಸುಂದರಿ' ಯರೆಂಬ ಕಿರೀಟ ತೊಡಿಸಿ, ಅವರ ಮೂಲಕ ಆಯಾ ದೇಶಗಳಲ್ಲಿ ಮಾರುಕಟ್ಟೆ ವಿಸ್ತರಿಸಿಕೊಳ್ಳುವ ಹುನ್ನಾರವೂ ಇದರ ಹಿಂದಿದೆ.

ನಾನಾ ಮಗ್ಗುಲುಗಳನ್ನು ಹೊಂದಿರುವ ಸೌಂದರ್ಯ ಸ್ಪರ್ಧೆಗಳಲ್ಲಿ ನಮ್ಮದು ಆಯ್ಕೆ ಆದಾಗ, ಹೆಮ್ಮೆ ಪಡಬೇಕೋ! ಜಿಗುಪ್ಸೆ ಪಡಬೇಕೋ ಎಂಬ ಸಣ್ಣ ಜಿಜ್ಞಾಸೆಯೊಂದು ಈಗ ಆರಂಭವಾಗಿದೆ, ಮುಂದಿನ ದಿನಗಳಲ್ಲಿ ನಮ್ಮ ಜನರಲ್ಲಿ ಅರಿವು ಹೆಚ್ಚಾದಂತೆ ಈ ಜಿಜ್ಞಾಸೆ ಇನ್ನಷ್ಟು ಆಳ ಹಾಗೂ ಅರ್ಥ ಪೂರ್ಣ ಆಗಲಿದೆ.

■ ಅನಿತಾ ಆರ್.ಎಸ್.

## ದತ್ತ

ಭಾರತದ
ಭ
ವನಗಳ
ನಿಸರ್ಗ
ದತ್ತ,
ಸೌಂದರ್ಯಾವ,
ಭುವನಕ್ಕೇ
ಮತ್ತೊಮ್ಮೆ
ಪ್ರತಿಷ್ಠಾಪಿಸಿದ
ಸುಂದರಿ
ಲಾರಾ
ದತ್ತ.

■ ಪ್ರಕಾಶ ಅಂಬರಕರ



# ಹೀಗೆ ಈ ಬದುಕು....



ಮನೇಲಿ ಇರುವುದೇ ನಾವು ಮೂರು ಜನ. ಮಗಳು ಚಿತ್ರಾ, ನಮ್ಮಿಬ್ಬರ ಕಣ್ಮಣಿ. ಮುದ್ದು ಜಾಸ್ತಿ. ಹಾಗಾಗಿ ಹಟವೂ ಹೆಚ್ಚು.

ಊರಿಂದ ವಯಸ್ಸಾದ ನೆಂಟರು ಬಂದಿದ್ದರು. ಅವರು ನಮ್ಮ ಮದುವೆಗೆ ಬರುವುದು ಸಾಧ್ಯ ಆಗಿರಲಿಲ್ಲ. ಬಹಳ ಬೇಸರ ವ್ಯಕ್ತಪಡಿಸಿದರು. 'ಮದುವೆ ಗಂತೂ ಬರುವುದಾಗಲಿಲ್ಲ. ಫೋಟೋ ಆದರೂ ನೋಡೋಣ' ಅಂದರು.

ಆಗಲೇ ಬಂದವರ ತೊಡೆಯೇರಿ ಕುಳಿತಿದ್ದ ಮಗಳು, ಅವರ ಜೊತೆಯೇ ಫೋಟೋ ಎಲ್ಲ ನೋಡಿದಳು. ಆಮೇಲೆ ಮಾತಲ್ಲಿ ತೊಡಗಿದೆವು. ಮಾತಿನ ನಡುವೆ ಮಗಳನ್ನು ಗಮನಿಸಲಿಲ್ಲ. ಊಟದ ಹೊತ್ತಿಗೆ ನೆನಪಾಯಿತು. ಹುಡುಕಿದರೆ ಮಹಡಿಯ ರೂಮಲ್ಲಿ ಮುನಿಸಿಕೊಂಡು ಕುಳಿತಿದ್ದಳು. ಕಾರಣ ಕೇಳಿದ್ದಕ್ಕೆ ಹೇಳಿದಳು. 'ಮದುವೇಲಿ ಅಷ್ಟೊಂದು ಫೋಟೋ ತೆಗಿಸಿಕೊಂಡಿದೀರ. ನಾನು ಒಂದೇ ಒಂದು ಫೋಟೋದಲ್ಲೂ ಇಲ್ಲ. ನನಗೇನೂ ಬೇಡ ಹೋಗಿ. ನಾನು ಊಟಾನೂ ಮಾಡೋದಿಲ್ಲ...' ಗಲ್ಲ ಊದಿಸಿಕೊಂಡು ಹೇಳಿದಳು.

**- ಸಾವಿತ್ರಿ ದೇಸಾಯಿ, ಹುಬ್ಬಳ್ಳಿ**

ಆಫೀಸಲ್ಲಿ ತುಂಬಾ ಕೆಲಸ. ಸಂಜೆ ಆಗುವಾಗ ಎಷ್ಟು ಸುಸ್ತಾಗಿದ್ದೆ ಎಂದರೆ, ಹೋಗಿ ಸುಮ್ಮನೆ ಹಾಸಿಗೆಯಲ್ಲಿ ಬೀಳಬೇಕು ಅನ್ನಿಸಿತ್ತು. ಪುಣ್ಯಕ್ಕೆ ಮನೆಯವರು ಇದ್ದರು. ಮುಖ ನೋಡಿದ್ದೇ ಅವರಿಗೆ ಎಲ್ಲ ಅರ್ಥ ಆಗಿರಬೇಕು. ಮಾತಿಲ್ಲದೇ ಚಹಾ ಮಾಡಿ ತಂದು ಕೊಟ್ಟರು. ಅದೂ, ಇದೂ ಮಾತಿಗೆಳೆದು ನನ್ನ ದಣಿವು, ಆಫೀಸಿನ ಚಿಂತೆ ಮರೆಯುವಂತೆ ಮಾಡಿದರು.

ಸ್ವಲ್ಪ ಹೊತ್ತಿಗೆ ಚೇತರಿಸಿಕೊಂಡೆ. ಗಂಡನ ಬಗ್ಗೆ ಕೃತಜ್ಞತೆ ಎನ್ನಿಸಿತು.

'ನಿಮ್ಮಂಥ ಗಂಡನ್ನ ಪಡೆದಿದ್ದು ನನ್ನ ಪುಣ್ಯ. ನನ್ನ ಚೈತನ್ಯ ನೀವು' ಎಂದೆ.

'ಅದಿರಲಿ. ಆದರೆ ನೀನೇ ನನ್ನ ದೌರ್ಬಲ್ಯ ಆಗಿಬಿಟ್ಟಿದ್ದೀಯಲ್ಲ!' ಎಂದು ಕಣ್ಣು ಮಿಟುಕಿಸಿ ರಸಿಕತೆ ಸೂಚಿಸಿದಾಗ ನನ್ನಲ್ಲಿ ಉತ್ತರವಿರಲಿಲ್ಲ.

**- ಶೈಲಜಾ ಮೋಹನ ಬೆಳ್ಳುಬ್ಬಿ, ಬಿಜಾಪುರ**

ನಮ್ಮ ಬಡಾವಣೆಯಲ್ಲಿ ಕಳ್ಳತನ ಹೆಚ್ಚಾದವು. ನಿತ್ಯ ಇದೇ ಗೋಳು. ಪೊಲೀಸರನ್ನು ಬೈದುಕೊಂಡು ಸುಮ್ಮನಾಗುವುದು. ಕೆಲವರು ಮೇಲಿನವರಿಗೆ ದೂರು ಹೇಳಿದರು. ಅದರ ಪರಿಣಾಮ ರಾತ್ರಿ ಗಸ್ತು ಜೋರಾಯಿತು.

ಹಾಗೆ ಮೇಲಿನವರಿಗೆ ದೂರು ಹೇಳಿದವರೊಬ್ಬರು ಹಿರಿಯರು ಕಾಲೇಜಲ್ಲಿ ಪ್ರೊಫೆಸರ್. ಅವರಿಗೆ ಪೊಲೀಸರ ಮೇಲಾಧಿಕಾರಿ ಶಿಷ್ಯನಾಗಿದ್ದ. ಪ್ರೊಫೆಸರ್ ಅಂದ ಮೇಲೆ ಮರೆವು ಜಾಸ್ತಿ. ಒಂದು ರಾತ್ರಿ ತಡವಾಗಿ ಮನೆಗೆ ಬಂದರು.



ಸ್ಕೂಟರ್ ಹೊರಗೆ ನಿಲ್ಲಿಸಿ, ಗ್ಯಾರೇಜಿನ ಕೀ ತಂದು ಒಳಗೆ ನಿಲ್ಲಿಸುವುದು ಉದ್ದೇಶ. ಮನೆಯೊಳಗೆ ಬಂದ ಮೇಲೆ ಅದು ಮರೆತೇ ಹೋಯಿತು.

ರಾತ್ರಿ ಗಸ್ತಿನ ಪೊಲೀಸರು ಅದನ್ನು ನೋಡಿ, ಎತ್ತಿಕೊಂಡು ಠಾಣೆಯಲ್ಲಿ ನಿಲ್ಲಿಸಿಕೊಂಡರು. ಬೆಳಿಗ್ಗೆ ಪರದಾಟ. ಕೊನೆಗೆ ಠಾಣೆಯಲ್ಲಿ ಸ್ಕೂಟರ್ ಇರುವುದು ತಿಳಿದು ನಿರಾಳವಾದರು. ಅಲ್ಲಿಗೆ ಹೋಗಿ, ಸ್ವಲ್ಪ ಬೈಸಿಕೊಂಡು ಸ್ಕೂಟರ್ ಪಡೆದುಕೊಂಡರು.

ಅವತ್ತು ಕಾಲೇಜು ಮುಗಿಸಿ ಬರುವಾಗ, ರಾತ್ರಿ ಗಸ್ತಿನವರ ಉಪಕಾರ ನೆನಪಾಯಿತು. ಅದನ್ನು ವ್ಯವಸ್ಥೆ ಮಾಡಿದ ಮೇಲಾಧಿಕಾರಿ ಶಿಷ್ಯನನ್ನು ಅಭಿನಂದಿಸಲೇಬೇಕು ಅನ್ನಿಸಿತು. ಹೋಗಿ ಆಫೀಸಿನ ಮುಂದೆ ಸ್ಕೂಟರ್ ನಿಲ್ಲಿಸಿ, ಶಿಷ್ಯನನ್ನು ಕಂಡು ಮೆಚ್ಚುಗೆಯ ಮಾತಾಡಿದರು. ಅದೂ ಇದೂ ಮಾತು ಆಡುತ್ತಾ ತಾಸು ಕಳೆಯಿತು. ಶಿಷ್ಯನ ಕೈ ಕುಲುಕಿ ಹೊರ ಬಂದು ನೋಡಿದರೆ ಸ್ಕೂಟರ್ ನಾಪತ್ತೆ. ಅದು ಈ ವರೆಗೂ ಪತ್ತೆಯಾಗಿಲ್ಲ.

**- ಗೌರಿ ಥಾಮಸ್, ಮಂಗಳೂರು.**

ಗೆಳೆಯ ಸೋಮು ಆಸ್ಪತ್ರೆ ಸೇರಿದ್ದ. ಆಕ್ಸಿಡೆಂಟ್ ಆಗಿ ಕಾಲು ಮುರಿದಿತ್ತು. ಬ್ಯಾಂಡೇಜು ಹಾಕಿದ್ದರು. ಮನೆಗೆ ಹೋಗಬಹುದು ಎಂದು ಡಾಕ್ಟರು ಹೇಳಿದ್ದರೂ, ಆಸ್ಪತ್ರೆಯಲ್ಲೇ ಇರಲು ನಿರ್ಧರಿಸಿದ್ದ. ಅದಕ್ಕೆ ಕಾರಣ ಅವನನ್ನು ನೋಡಿಕೊಳ್ಳುತ್ತಿದ್ದ ನರ್ಸ್ ಎಂಬುದು ಬೇಗ ತಿಳಿಯಿತು.

ಇದೊಳ್ಳೆ ಫಜೀತಿ ಅಂದುಕೊಂಡೆವು. ಕೊನೆಗೆ ಉಪಾಯ ಮಾಡಿ ಹೊರಡಿಸಲು ಸಂಚು ಮಾಡಿದೆವು.

'ನೀನು ಅವಳ ಮೇಲೆ ಆಸೆ ಇಟ್ಕೊಂಡಿದೀಯ.

ಅವಳಿಗೆ ಆಗಲೇ ಮದುವೆ ಆಗಿದೆ' ಎಂದೆವು.



'ಇಲ್ಲ, ಇಲ್ಲ. ನಾನು ಚೆನ್ನಾಗಿ ನೋಡಿದೀನಿ. ಕಾಲುಂಗುರ, ತಾಳಿ ಯಾವುದೂ ಇಲ್ಲ...'

'ಪೆದ್ದ ನೀನು. ನರ್ಸ್‌ಗಳು ಅದೆಲ್ಲ ಹಾಕ್ಕೊಳ್ಳೋ ಹಾಗಿಲ್ಲ. ಬೇಕಾದರೆ ಇವತ್ತು ಬರ್‍ತಾಳಲ್ಲ ಆಗ ವಿಚಾರಿಸು'.

'ಸರಿ' ಎಂದ ಸೋಮು.

ಆದರೆ ನರ್ಸ್‌ನ ವಿಚಾರಿಸಲು ಧೈರ್ಯವಾಗದೇ, ಮಾರನೇ ದಿನ ಆಸ್ಪತ್ರೆಯಿಂದ ಜಾಗ ಖಾಲಿ ಮಾಡಿದ. ಕೆಲವೇ ದಿನಕ್ಕೆ ಅವನ ಮದುವೆಯೂ ಆಯಿತು. ವರ್ಷ ಕಳೆಯುವಾಗ ಒಂದು ದಿನ ಅಂಚೆಯಲ್ಲಿ ಆಹ್ವಾನ ಪತ್ರ ಬಂತು. ಮದುವೆಯದು. ಅದೂ ಆ ನರ್ಸ್‌ನಿಂದ.

ಅವತ್ತು ಅವನು ನಮ್ಮ ಮೇಲೆ ರೇಗಿದಷ್ಟು ಯಾವತ್ತೂ ರೇಗಿರಲಿಲ್ಲ.

**- ಅಶೋಕ, ಹಾಸನ.**

ನಮ್ಮ ಸೋದರ ಮಾವ ಇನ್‌ಸ್ಪೆಕ್ಟರ್. ಊರ ದೇವಸ್ಥಾನದಲ್ಲಿ ಕಳುವಾಗಿತ್ತು. ಅದರ ತನಿಖೆಗೆ ಬಂದರು. ಶಂಕಿತ ವ್ಯಕ್ತಿ ಒಬ್ಬನನ್ನು ವಿಚಾರಿಸಿದರು. ಏನು ಮಾಡಿದರೂ ಅವನು ಬಾಯಿ ಬಿಡಲಿಲ್ಲ.

ಇದನ್ನು ಗಮನಿಸಿದ ಗುಡಿಯ ಪೂಜಾರಿ, ತಾನು ಅವನ ಜೊತೆ ಸ್ವಲ್ಪ ಹೊತ್ತು ಮಾತಾಡುವುದಾಗಿ ಹೇಳಿದರು. ಕೊಂಚ ದೂರಕ್ಕೆ ಕರೆದುಕೊಂಡು ಹೋಗಿ, ಸ್ವಲ್ಪ ಹೊತ್ತು ಮಾತಾಡಿದರು. ಅಲ್ಲಿಂದ ಬಂದವರೇ, ಕಳುವಾದ ವಸ್ತು ಇಂಥ ಕಡೆ ಇಟ್ಟಿರುವುದು ತಿಳಿಸಿದರು.

ಮಾವನವರಿಗೆ ಆಶ್ಚರ್ಯ. ಪೊಲೀಸರಿಗೂ ಜಗ್ಗದ ಕಳ್ಳ ಪೂಜಾರಿಯ ಹತ್ತಿರ ಅಷ್ಟು ಸಲೀಸಾಗಿ ಒಪ್ಪಿಕೊಂಡಿದ್ದು ಹೇಗೆ!

ಅದಕ್ಕೆ ಪೂಜಾರಪ್ಪ ನಗುತ್ತಾ ಹೇಳಿದರು.

'ನೀವು ಹೆಚ್ಚು ಅಂದರೆ ಅವನ್ನ ಜೈಲಿಗೆ ಕಳಿಸಬಹುದು. ನಾನು ರೌರವ ನರಕಕ್ಕೆ ಕಳಿಸಬಲ್ಲೆ ಗೊತ್ತಾ?'

**- ಹರೀಶ್, ಮೈಸೂರು.**

# ಪ್ರಾಣಿ ಪ್ರಪಂಚದಲ್ಲಿ "ವಾಸನೆ"



**ವಾಸನೆಗಳು ಸಂಗಾತಿಯ ಆಕರ್ಷಕಗಳಾಗಿ, ಪ್ರೀತಿಯ ಸಂದೇಶಗಳಾಗಿ ವಸ್ತುಗಳನ್ನು ಗುರುತಿಸುವುದಕ್ಕಾಗಿ ಎಚ್ಚರಿಕೆಯ ಗಂಟೆಗಳಾಗಿ ಕೆಲಸಮಾಡುತ್ತವೆ.**

ಆಲೋಚನಾ ಶಕ್ತಿಯನ್ನು ಹೊಂದಿ ಜೀವಕುಲದಲ್ಲಿಯೇ ಶ್ರೇಷ್ಠ ಎಂದೆನಿಸಿಕೊಂಡಿರುವ ಮಾನವ ಅನೇಕ ರೀತಿಯ ಶಕ್ತಿಯನ್ನು ಹೊಂದಿದ್ದಾನೆ. ಆದರೆ ಪ್ರಾಣಿ ಪ್ರಪಂಚ ಇದೆಲ್ಲಕ್ಕೂ ಮಿಗಿಲಾದ ಶಕ್ತಿಯನ್ನು ಹೊಂದಿವೆ. ಅದೆಂದರೆ ಅವುಗಳ ವಾಸನಾ ಸಾಮರ್ಥ್ಯ ಸೃಷ್ಟಿಯ ವೈಚಿತ್ರ್ಯಗಳಲ್ಲೊಂದು. ಇದು ಮಾನವನಲ್ಲಿ ಅಷ್ಟು ಪ್ರಬಲವಾಗಿಲ್ಲ.

ದಾರಿಯುದ್ದಕ್ಕೂ ಮೂತ್ರ ವಿಸರ್ಜಿಸುತ್ತಾ ಹೋಗುವ ನಾಯಿ, ತನ್ನ ಮೈಯನ್ನು ಗೋಡೆ, ಮರ ಕಂಬಗಳಿಗೆ ಉಜ್ಜುವ ಎಮ್ಮೆ ಹಸುಗಳನ್ನು ನೋಡಿದಾಗ ನಮ್ಮದು ಸಹಜಕ್ರಿಯೆ ಎನಿಸುತ್ತದೆ. ಆದರೆ ಅದರ ಹಿಂದಿರುವ ವಿಸ್ಮಯ ತಿಳಿದಾಗಲೇ ಗೊತ್ತು. ಸಾಲಾಗಿ ಹೋಗುತ್ತಿರುವ ಇರುವೆಗಳ ಸಾಲಿಗೆ ನಾವು ಎಲೆಯೊಂದನ್ನು ಅಡ್ಡ ಹಿಡಿದಾಗ ಅವೆಲ್ಲವೂ ಚದುರಿದಂತೆ ಸರಿದು ಹೋಗುತ್ತದೆ. ಹೀಗೆ ಕ್ರಿಮಿ ಕೀಟಗಳು ತಮ್ಮದೇ ಆದ ವಾಸನೆಯೊಂದನ್ನು ಹೊಂದಿವೆ. ಈ ವಾಸನಾ ಸಾಮರ್ಥ್ಯ ಪ್ರಾಣಿ ಲೋಕದಲ್ಲಿ ಹಲವಾರು ಕ್ರಿಯೆಗಳಿಗೆ ಸಹಕಾರಿಯಾಗಿವೆ. ಈ ವಾಸನೆಗಳು ಸಂಗಾತಿಯ ಆಕರ್ಷಕಗಳಾಗಿ, ಪ್ರೀತಿಯ ಸಂದೇಶಗಳಾಗಿ ವಸ್ತುಗಳನ್ನು ಗುರುತಿಸುವುದಕ್ಕಾಗಿ ಎಚ್ಚರಿಕೆಯ ಗಂಟೆಗಳಾಗಿ ಕೆಲಸಮಾಡುತ್ತವೆ. ಜೀವಿಗಳಲ್ಲಿರುವ ನಿರ್ನಾಳ ಗ್ರಂಥಿಗಳು ಹಾರ್ಮೋನ್‌ಗಳನ್ನು ಉತ್ಪಾದನೆ, ಜೀವಿಯ ಎಲ್ಲ ಜೈವಿಕ ಚಟುವಟಿಕೆಗಳನ್ನು ನಿಯಂತ್ರಿಸುವುದು ತಿಳಿದ ವಿಷಯ. ಅದೇ ರೀತಿಯಾಗಿ ಜೀವಿಗಳ ಹೊರಮೈಯಲ್ಲಿ ಇರುವ ಹಲವು ಗ್ರಂಥಿಗಳು ಕೆಲವು ರಾಸಾಯನಿಕ ಸಂಯುಕ್ತಗಳನ್ನು ಉತ್ಪಾದಿಸುತ್ತವೆ. ಇವುಗಳನ್ನು ನಿರ್ದಿಷ್ಟ ಗುರಿಗೆ ಸಾಗಿಸಲು ಯಾವುದೇ ಮಾಧ್ಯಮದ ಅವಶ್ಯಕತೆಯಿಲ್ಲ. ಗಾಳಿಯಲ್ಲಿ ಸಂವಹನ ಹೊಂದಿ ನಿರ್ದಿಷ್ಟ ವಾಸನೆಗಳಂತೆ ಇವು ಕೆಲಸ ಮಾಡುತ್ತಿವೆ. ಇವುಗಳೇ ಪೆರೋಮನ್‌ಗಳು. ರಾಸಾಯನಿಕ ಸಂಕೇತಗಳಂತೆ ಕೆಲಸ ಮಾಡುವ ಇವು ಹಲವಾರು ಬಾರಿ ಭಾಷೆಯ ಸಂಕೇತಗಳೂ ಆಗುತ್ತವೆ.

ಪ್ರಯೋಗವೊಂದರಲ್ಲಿ ದೈತ್ಯ ಹೆಣ್ಣು ರೇಷ್ಮೆ- ಪತಂಗವೊಂದನ್ನು ಕೋಣೆಯೊಂದರಲ್ಲಿ ಬಂಧಿಸಿ ಇಟ್ಟಾಗ ಅದು ಒಂದು ರಾತ್ರಿಯಲ್ಲಿ 125 ಗಂಡು ಪತಂಗಗಳನ್ನು ಆಕರ್ಷಿಸಿದ್ದು ಕಂಡು ಬಂದಿತು. ಕಿಟಕಿಯ ಬಾಗಿಲುಗಳನ್ನು ಮುಚ್ಚಿದಾಗ ಹಲವಾರು ಗಂಡು ಪತಂಗಗಳು ಕಿಟಕಿಯ ಗಾಜಿನ ಮೇಲೆ ಆಕ್ರಮಣ ಮಾಡಿದವು. ಅಧ್ಯಯನವೊಂದರ ಪ್ರಕಾರ ಹೆಣ್ಣು ಪತಂಗ ತನ್ನ ಫೆರೋಮನ್ ಉತ್ಪಾದಿಸುವ ಗ್ರಂಥಿಯನ್ನು ತೆರೆದಿಡುವುದಿಲ್ಲ. ಒಮ್ಮೊಮ್ಮೆ ತೆರೆಯುತ್ತದೆ, ಒಮ್ಮೊಮ್ಮೆ ಮುಚ್ಚುತ್ತದೆ. ಅದು ಈ ರೀತಿಯಾಗಿ ಮಾಡುವುದರಿಂದ ಗಂಡು ಪತಂಗದ ವಾಸನಾಗ್ರಾಹಕವು ಸಂಪೂರ್ಣವಾಗಿ ಈ ವಾಸನೆಗೆ ಹೊಂದಿಕೊಂಡು ಹೋಗುವುದನ್ನು ತಡೆಯುತ್ತದೆ. ಈ ಗ್ರಂಥಿಯನ್ನು ತೆರೆದಿಟ್ಟರೆ ಅವುಗಳಲ್ಲಿ ಯಾವುದೇ ಆಕರ್ಷಣೆ ಇರುವುದು ಕಾಣುವುದಿಲ್ಲ.

ಇದೇ ರೀತಿಯಾಗಿ ರಾಣಿ ಜೇನುನೊಣ ತನ್ನ ಮ್ಯಾಂಡಿಬಲ್‌ನಲ್ಲಿರುವ ಗ್ರಂಥಿಯಿಂದ ಉತ್ಪಾದಿಸುವ ಫೆರೂಮೆನ್‌ನ ಸಹಾಯದಿಂದ ಗಂಡುಜೇನ್ನೊಣಗಳನ್ನು ಆಕರ್ಷಿಸುತ್ತದೆ. ಅದರಂತೆ ಗೆದ್ದಲು, ಜಿರಲೆಗಳಲ್ಲಿ ಹೊಟ್ಟೆಯ ಹಿಂಭಾಗದಲ್ಲಿರುವ ಗ್ರಂಥಿ ಇದನ್ನು ಉತ್ಪಾದಿಸುತ್ತದೆ.

ಇದೇ ರೀತಿಯಾಗಿ ಕಸ್ತೂರಿಮೃಗ ಹೊರಡಿಸುವ ಕಸ್ತೂರಿಯ ಸುವಾಸನೆಯನ್ನು ಹೆಣ್ಣು ಕಸ್ತೂರಿಮೃಗ ಸುಮಾರು 2 ಕಿ.ಮೀ ದೂರದಿಂದಲೇ ಗುರುತಿಸಿ ಸಂಗಾತಿಯನ್ನರಸಿ ಬರಬಲ್ಲದು. ಹೀಗೆ ವಾಸನಾಲೋಕದಲ್ಲಿ ಪ್ರಾಣಿಗಳ ವರ್ತನೆ ಅತ್ಯದ್ಭುತ.

■ ಸುಜಾತಾ ಜಿ. ಹುಲ್ಲೂರು

## ಚುನಾವಣೆ ಬಂತು ಚುನಾವಣೆ




ಚುನಾವಣೆ ಹತ್ತಿರ ಬಂದಾಗ ಇಂಥವೆಲ್ಲಾ ಸರ್ವೆ ಸಾಮಾನ್ಯವಾಗಿ ನಮ್ಮ ಸುತ್ತ ಮುತ್ತ ಕಂಡು ಬರುತ್ತದೆ.




ರೀ... ಎದ್ದೇಳ್ರಿ...ಘಾತವಾಯ್ತು...!!



ನಾವು ನಿಮಗಿಂತಲೂ ಹೆಚ್ಚು ಹಸಿದಿದ್ದೇವೆ...
ನೀವೆಲ್ಲಾ ಸಹಕರಿಸುವಿರೆಂದು ನಂಬಿದ್ದೇವೆ.




ಸಾಕಷ್ಟು ಜನರು ಇಂತಹ ಒಳ್ಳೆಯ ನಿರ್ಣಯ
ತೆಗೆದುಕೊಂಡರೆ ದೇಶದಭಾರ ಕಡಿಮೆಯಾಗಬಹುದು.

# ಹೆಸರು ಟಾಟಾ ಸುಮೋ ಪ್ರಯಾಣ ಲಾರಿಯಲ್ಲಿ



ತಿವಾರಿ ಮತ್ತವನ ಕುಟುಂಬ

ಬಿಹಾರದ ಹಾಜಿಪುರದ ಹರಿಹರ ತಿವಾರಿಯನ್ನು, ಅವನಿರುವ ರಾಮ್‌ಚೌಕ್ ಪ್ರದೇಶದ ಜನ 'ಟಾಟಾ ಸುಮೋ' ಎಂದೇ ಕರೆಯುತ್ತಾರೆ. 400 ಕೆ.ಜಿ. ತೂಕದ ಈ ಮನುಷ್ಯನಿಗೆ ಏಳು ಹೆಂಡತಿಯರು, 34 ಜನ ಮಕ್ಕಳು ಇಪ್ಪತ್ತು ಮೊಮ್ಮಕ್ಕಳು.

ದಿನಕ್ಕೊಂದು ಕಿಲೋ ಮಟನ್, ಹತ್ತು ಹುರಿದ ಮೀನು, ಹತ್ತು ಮೊಟ್ಟೆ, ಅರ್ಧಕಿಲೋ ಅಕ್ಕಿ ಹಲವಾರು ಸ್ಯಾಚೆಟ್ ಸಾರಾಯಿ ಇವನಿಗೆ ಬೇಕೇ ಬೇಕು.

ಹಾಗೆ ನೋಡಿದರೆ ಹರಿಹರ ತಿವಾರಿ ಮೊದಲು ಅಂಥ ದಪ್ಪವೇನೂ ಇರಲಿಲ್ಲ. ಚಿಕ್ಕವನಿದ್ದಾಗಿಂದಲೂ ಮಾಂಸವೆಂದರೆ ಮಹಾ ಇಷ್ಟ. ಎಷ್ಟೋ ಸಲ ದಿನಕ್ಕೆ ಐದು ಕೆ.ಜಿ. ಮಾಂಸ ಗುಳಕಾಯಿಸುತ್ತಿದ್ದ. ಇಪ್ಪತ್ತೈದು ದಾಟುವಾಗ ಎಣ್ಣೆಗೆ ಹಾಕಿದ ಬೋಂಡಾದಂತೆ ಉಬ್ಬಲುತೊಡಗಿದ. ಅಂದಿನಿಂದ ಸತತವಾಗಿ ಊದಿಕೊಳ್ಳುತ್ತ ಐವತ್ತು ತುಂಬಿರುವ ಈಗ ಬರೋಬ್ಬರಿ 400 ಕೆ.ಜಿ. ತೂಗುತ್ತಾನೆ.

ಹರಿಹರ ತಿವಾರಿ ಮದುವೆ ಆದಾಗ ಕೇವಲ 15 ವರ್ಷ. ಹತ್ತು ವರ್ಷದ



ಹರಿಹರ ತಿವಾರಿ

ತಕಾವತಿ ದೇವಿಯನ್ನು ಮದುವೆ ಆದದ್ದು. ಆಕೆಗೀಗ ಆರು ಮಕ್ಕಳು. ಆತನ ಇನ್ನಿಬ್ಬರು ಹೆಂಡತಿಯರಾದ ತಾವೇಶ್ವರಿ ಮತ್ತು ಕಲಾವತಿಯರಿಗೂ ಆರಾರು ಮಕ್ಕಳು. ಜೋಗೇಶ್ವರಿ ಎಂಬ ಹೆಂಡತಿಗೆ ನಾಲ್ಕು ಮಕ್ಕಳು. ಇನ್ನಿಬ್ಬರು ಪತ್ನಿಯರಾದ ಊರ್ಮಿಳಾ ಮತ್ತು ಬಟಿ ತಲಾ ಐದು ಮಕ್ಕಳಿಗೆ ಜನ್ಮವಿತ್ತಿದ್ದಾರೆ. ಎಂಟು ವರ್ಷದ ಹಿಂದೆ ಮದುವೆಯಾದ ಬಟಿದೇವಿಗೆ ಎರಡು ಮಕ್ಕಳಿವೆ.

ಈಗಲೂ ಮಕ್ಕಳ ಭಾಗ್ಯಕ್ಕಾಗಿ ಹಾತೊರೆಯುವ ತಿವಾರಿ, 'ಮೊದಲಿನಂತೆ ಇರಲು ಸಾಧ್ಯವಿಲ್ಲ. ಈಗ ಬೆಳೆದ ಮಕ್ಕಳು ಮನೆಯಲ್ಲಿ ಇರುತ್ತಾರೆ' ಎಂದು ಸಂಕೋಚದಿಂದ ಹೇಳುತ್ತಾನೆ. ಮಾಂಸದ ಪರ್ವತದಂತೆ ತೋರುವ ಈತ ಜಪಾನಿನ ಸುಮೋ ಮಲ್ಲರ ಹಾಗೇನೋ ಇದ್ದಾನೆ. ಆದರೆ ಅವರ ಹಾಗೆ ಚುರುಕಾಗಿ ಕೈಕಾಲು ಆಡಿಸಲೂ ಸಾಧ್ಯವಾಗುವುದಿಲ್ಲ. ಈತನ ತೂಕಕ್ಕೆ ರಿಕ್ಷಾಗಳೇ ಮುರಿದಿವೆ. ಹೀಗಾಗಿ ಆತ ಲಾರಿಯಲ್ಲೇ ಪ್ರಯಾಣಿಸುತ್ತಾನೆ. ಹಗ್ಗ ಕಟ್ಟಿ ಅವನನ್ನು ಮೇಲಕ್ಕೆತ್ತಿ ಲಾರಿಯೊಳಗೆ ಇಳಿಸಬೇಕಾಗುತ್ತದೆ. ಆತ ಎಲ್ಲಿ ಹೋದರೂ ಕುತೂಹಲದಿಂದ ಜನ ಮುತ್ತಿಕೊಳ್ಳುತ್ತಾರೆ.

ಒಮ್ಮೊಮ್ಮೆ ಇಡೀ ಕುಟುಂಬದವರು ಪ್ರಯಾಣ ಕೈಗೊಳ್ಳುತ್ತಾರೆ. ಹೊರ ಊರಿಗೆ ಹೋದಾಗ ಅಲ್ಲಿ ಟೆಂಟು ಹಾಕಿಕೊಂಡು ಇರುತ್ತಾರೆ.

ಹತ್ತಿರದ ಜವಳಿ ವ್ಯಾಪಾರಿಗಳ ಬಳಿ ಹೋಗಿ ಬಟ್ಟೆ ಖರೀದಿಸಿ ತರುವ ತಿವಾರಿ, ಅದನ್ನು ಮಾರುವ ಕೆಲಸ ಹೆಂಡತಿಯರಿಗೆ ಒಪ್ಪಿಸಿದ್ದಾನೆ. ಹೊಟ್ಟೆಗಂತೂ ತೊಂದರೆ ಇಲ್ಲದೆ ಸುಖವಾಗಿದ್ದಾನೆ.

■

# ಅಳುವ ಗಂಡಸನ್ನು ನಂಬಬೇಕೆ?



ಸಂದರ್ಶನ ನಡೆದಾಗಿನಿಂದ ನೆಟ್ಟಗೆ ನಿದ್ದೆ ಮಾಡುವುದು ಕಪಿಲ್‌ಗೆ ಸಾಧ್ಯವಾಗಿಲ್ಲ. ಕಣ್ಣ ಕೆಳಗೆ ಕಪ್ಪು ಕಾಣಿಸಿಕೊಂಡಿದೆ. ಕಣ್ಣಲ್ಲಿದ್ದ ಮಿಂಚು ಮರೆಯಾಗಿದೆ. ನಲವತ್ತರ ಈ ಮನುಷ್ಯ ಏಕಾಏಕಿ ಐವತ್ತು ತುಂಬಿದವನಂತೆ ಕಾಣುತ್ತಾನೆ. ಕ್ರಿಕೆಟ್‌ನಲ್ಲಿ ಆಗಲಿ, ಬೇಗನೆ ಜನಪ್ರಿಯತೆ ಪಡೆಯಬಹುದಾದ ಯಾವುದೇ ರಂಗದಲ್ಲಿ ಆಗಲಿ ಲಕ್ಷಾಂತರ ಜನರ ಆರಾಧ್ಯ ದೈವ ಎನಿಸಿಕೊಂಡಿದ್ದವರು ರಾತ್ರಿ ಬೆಳಗಾಗುವುದರಲ್ಲಿ ಸಿಂಹಾಸನದಿಂದ ಕೆಳಗೆ ಉರುಳಲು ಸಣ್ಣ ಕಾರಣ ಸಾಕು.

ಪ್ರಸಿದ್ಧ ಕತೆಗಾರ ಗಾಯ್ ದ ಮೊಪಾಸಾನ ಕತೆಯೊಂದಿದೆ. 'The piece of String' ಅದರ ಹೆಸರು. ಸಂತೆಗೆ ಬರುವಾಗ ರೈತನೊಬ್ಬ ದಾರಿಯಲ್ಲಿ ಬಿದ್ದಿದ್ದ ಹಗ್ಗದ ತುಂಡು ಕಾಣುತ್ತಾನೆ. ಏತಕ್ಕಾದರೂ ಉಪಯೋಗ ಆಗಬಹುದು ಎಂದು ಹೆಕ್ಕಿ ಜೇಬಿಗಿಟ್ಟುಕೊಳ್ಳುತ್ತಾನೆ. ಇದನ್ನು ಅವನಿಗಾಗದವನೊಬ್ಬ ನೋಡುತ್ತಾನೆ. ಅದೇ ದಿನ ಊರಲ್ಲಿ ಶ್ರೀಮಂತನೊಬ್ಬ ಸಂತೆಗೆ ಬರುವಾಗ ಹಣದ ಪಾಕೀಟು ಬೀಳಿಸಿಕೊಂಡಿರುತ್ತಾನೆ. ರಸ್ತೆಯಲ್ಲಿ ರೈತ ಹೆಕ್ಕಿಕೊಂಡಿದ್ದು ಅದೇ ಪಾಕೀಟು ಎಂದು ರೈತನಿಗಾಗದವನು ಊರಿನ ಮೇಯರ್‌ಗೆ ಹೇಳುತ್ತಾನೆ. ರೈತನನ್ನು ಪೊಲೀಸರು ಕರೆದೊಯ್ಯುತ್ತಾರೆ. ವಿಚಾರಣೆ ಆಗುತ್ತದೆ. ಜೇಬಲಿದ್ದ ಹಗ್ಗದ ತುಂಡು ತೆಗೆದು, ಇದನ್ನೇ ತಾನು ಹೆಕ್ಕಿಕೊಂಡಿದ್ದು ಎಂದರೆ ಅವರು ನಂಬುವುದಿಲ್ಲ. ಅವನನ್ನು ಶೋಧಿಸಿ ನಿರಾಶರಾಗಿ ಬಿಡುತ್ತಾರೆ. ಎರಡು ದಿನದ ನಂತರ ಪಾಕೀಟು ಸಿಗುತ್ತದೆ. ರಸ್ತೆಯಲ್ಲಿ ಬೇರೆ ಯಾರಿಗೋ ಅದು ಸಿಕ್ಕಿರುತ್ತದೆ. ಆದರೆ ರೈತ ರಸ್ತೆಯಲ್ಲಿ ಹೆಕ್ಕಿದ್ದು ಹಗ್ಗದ ತುಂಡು ಎಂದು ಯಾರೂ ನಂಬುವುದಿಲ್ಲ. ರೈತ ತಾನು ಸಾಯುವವರೆಗೂ ಸತ್ಯ ಮನಗಾಣಿಸಲು ಹೆಣಗುತ್ತಾ, ಗೇಲಿಗೆ ಒಳಗಾಗುತ್ತಾ, 'ವಂಚಕ' ಎನಿಸಿಕೊಂಡೇ ಬಾಳಬೇಕಾಗುತ್ತದೆ.

ನಮ್ಮ ಕ್ರಿಕೆಟ್ ವೀರ ಕಪಿಲ್‌ದೇವ್‌ನ ಟಿವಿ ಸಂದರ್ಶನ ನೋಡಿದಾಗ ಈ ಕತೆ ನೆನಪಾಯಿತು.

ಅವತ್ತು ನಗುನಗುತ್ತಾ ಸಂದರ್ಶನಕ್ಕೆ ಬಂದಿದ್ದ ಆತ್ಮವಿಶ್ವಾಸ ಇತ್ತು. ತಾನು ಪ್ರಾಮಾಣಿಕ, ಸತ್ಯ ಗೆಲ್ಲುತ್ತದೆ ಎಂಬ ದೃಢತೆ ಇತ್ತು. ಆದರೆ ಕರಣ್ ಥಾಪರ್‌ನ ಮಾತಿನ ದಾಳಿಗೆ ಕಪಿಲ್ ಎಷ್ಟು ತತ್ತರಿಸಿ ಹೋದನೆಂದರೆ ಆತ ಬಿಕ್ಕಿ ಬಿಕ್ಕಿ ಅಳತೊಡಗಿದ.

ನಲವತ್ತೊಂದು ವರ್ಷದ ಕಪಿಲ್ ಒಳ್ಳೆಯ ಪಟುವಾದ ದೇಹ ಪಡೆದಿದ್ದ. ಹಾಗಾಗಿಯೇ ಆತ ಇನ್ನೂ 35 ವರ್ಷದವನ ಹಾಗೆ ಕಾಣುತ್ತಿದ್ದ. ಫಳಕ್ಕನೆ ಮುಖದಲ್ಲಿ ನಗೆ ಮೂಡುತ್ತಿತ್ತು. ಅದರಲ್ಲೊಂದು ವಿಶ್ವಾಸ ಇರುತ್ತಿತ್ತು. ನೋಡುವವರ ಕಣ್ಣಲ್ಲಿಯೂ ಮೆಚ್ಚುಗೆ ಇರುತ್ತಿತ್ತು. ಇದ್ದಕ್ಕಿದ್ದ ಹಾಗೆ ಎಲ್ಲ ಬದಲಾಗಿ ಬಿಟ್ಟಿದೆ.

ಸಾರ್ವಜನಿಕ ಸ್ಥಳಗಳಲ್ಲಿ ಎದುರಾಗುವ ಜನ ಹೆಮ್ಮೆಯಿಂದ ಆತನತ್ತ ನೋಡುವುದಿಲ್ಲ. ಕಣ್ಣು ತಪ್ಪಿಸಲು ಯತ್ನಿಸುತ್ತಾರೆ. ಅಕಸ್ಮಾತ್ ಕಣ್ಣು ಬೆರೆತರೆ, ಒಂದು ಬಗೆಯ ತಾತ್ಸಾರ ತುಂಬಿರುತ್ತದೆ.

ಸಂದರ್ಶನ ನಡೆದಾಗಿನಿಂದ ನೆಟ್ಟಗೆ ನಿದ್ದೆ ಮಾಡುವುದು ಕಪಿಲ್‌ಗೆ ಸಾಧ್ಯವಾಗಿಲ್ಲ. ಕಣ್ಣ ಕೆಳಗೆ ಕಪ್ಪು ಕಾಣಿಸಿಕೊಂಡಿದೆ. ಕಣ್ಣಲ್ಲಿದ್ದ ಮಿಂಚು ಮರೆಯಾಗಿದೆ. ನಲವತ್ತರ ಈ ಮನುಷ್ಯ ಏಕಾಏಕಿ ಐವತ್ತು ತುಂಬಿದವನಂತೆ ಕಾಣುತ್ತಾನೆ. ಕ್ರಿಕೆಟ್‌ನಲ್ಲಿ ಆಗಲಿ, ಬೇಗನೆ ಜನಪ್ರಿಯತೆ ಪಡೆಯಬಹುದಾದ ಯಾವುದೇ ರಂಗದಲ್ಲಿ ಆಗಲಿ ಲಕ್ಷಾಂತರ ಜನರ ಆರಾಧ್ಯ ದೈವ ಎನಿಸಿಕೊಂಡಿದ್ದವರು ರಾತ್ರಿ ಬೆಳಗಾಗುವುದರಲ್ಲಿ ಸಿಂಹಾಸನದಿಂದ ಕೆಳಗೆ ಉರುಳಲು ಸಣ್ಣ ಕಾರಣ ಸಾಕು. ಮೂರು ವರ್ಷದಿಂದಲೂ ಮನೋಜ್ ಪ್ರಭಾಕರ್ ಮ್ಯಾಚ್ ಫಿಕ್ಸಿಂಗ್ ಬಗ್ಗೆ ತರಲೆ ಎಬ್ಬಿಸುತ್ತಿದ್ದ. ನ್ಯಾಯಮೂರ್ತಿ ಚಂದ್ರಚೂಡ್ ಆಯೋಗದ ಎದುರು ಇದೇ ವಿಷಯ ಹೇಳಿದ್ದನಾದರೂ, ಯಾರ ಹೆಸರನ್ನೂ ಆತ ಬಹಿರಂಗಗೊಳಿಸಿರಲಿಲ್ಲ. ಈಚೆಗೆ ದಕ್ಷಿಣ ಆಫ್ರಿಕಾದ ಹ್ಯಾನ್ಸಿ ಕ್ರೋನಿಯೆ ದಳ್ಳಾಳಿಗಳಿಂದ ಹಣ ಪಡೆದು ಪಂದ್ಯ ಸೋತ ಹಗರಣ ಬಯಲಾಗುತ್ತಾ ಇದ್ದ ಹಾಗೆ, ಭಾರತೀಯ ಆಟಗಾರರ ಪಾತ್ರದ ಬಗ್ಗೆಯೂ

ಭಾರೀ ಗುಸು ಗುಸು ಶುರುವಾಯಿತು. ಮನೋಜ್ ಪ್ರಭಾಕರ್ ತನ್ನ ಖಾಸಗಿ ಮಾತುಕತೆಯ ವೇಳೆ 1994ರ ಸಿಂಗಲ್ ಕಪ್ ಸಂದರ್ಭದಲ್ಲಿ ಕಪಿಲ್‌ದೇವ್ ತನಗೆ ಹಣ ನೀಡಲು ಮುಂದಾಗಿದ್ದ ಎಂದು ತಿಳಿಸುತ್ತಾ ಬಂದ. ಅದೇ ವಿಚಾರ ಕ್ರಿಕೆಟ್ ನಿಯಂತ್ರಣ ಮಂಡಳಿಯ ಮಾಜಿ ಮುಖ್ಯಸ್ಥ ಪಿ.ಎಸ್. ಬಿಂದ್ರಾಗೂ ತಿಳಿಸಿದ. ಅದನ್ನಾತ ಸಿ.ಎನ್.ಎನ್.ಗೆ ನೀಡಿದ ಸಂದರ್ಶನದಲ್ಲಿ ತಿಯಲುಗೊಳಿಸಿದ.

ಅಲ್ಲಿಂದ ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಂತೆ ಆಗಿದೆ. ಕಪಿಲ್ ಇದರಿಂದ ವ್ಯಗ್ರವಾಗಿದ್ದಾನೆ. ಈಗ ಹೇಳಿಕೆ ನೀಡಿದ ಬಿಂದ್ರಾ ವಿರುದ್ಧ ಮೊಕದ್ದಮೆ ಹೂಡಬೇಕೇ? ಇಲ್ಲ ಹೇಳಿಕೆಗೆ ಕಾರಣವಾದ ಮನೋಜ್ ಪ್ರಭಾಕರ್ ವಿರುದ್ಧ ಕ್ರಮ ಜರುಗಿಸಬೇಕೇ? ಎಂಬ ಜಿಜ್ಞಾಸೆಯಲ್ಲಿ ಇದ್ದ. ಆ ಹಂತದಲ್ಲಿಯೇ ಬಿಬಿಸಿಗಾಗಿ ಕರಣ್ ಥಾಪರ್ ನಡೆಸಿದ ಸಂದರ್ಶನ ಇದೆಲ್ಲಕ್ಕೂ ಬೇರೆಯದೇ ಆಯಾಮ ತಂದು ಬಿಟ್ಟಿದೆ.

ಕಪಿಲ್‌ದೇವ್‌ನ ಕ್ರಿಕೆಟ್ ಸಾಧನೆ ದೊಡ್ಡದು. ಮುಖ್ಯ, ಭಾರತ ಕ್ರಿಕೆಟ್ ತಂಡ ಬಿಕ್ಕಟ್ಟಿಗೆ ಸಿಕ್ಕಿದ್ದಾಗ ಅಪದ್ಬಾಂಧವನ ಹಾಗೆ ಬಂದು ರಕ್ಷಿಸಿದ್ದಾನೆ. ಇಂಗ್ಲೆಂಡಿನ ವಿರುದ್ಧ ಫಾಲೋ ಆನ್ ತಪ್ಪಿಸಿಕೊಳ್ಳಲು ಭಾರತ ಆಗ 24 ರನ್ ಮಾಡಬೇಕಿತ್ತು. ಉಳಿದದ್ದು ನಾಲ್ಕೇ ಬಾಲ್. ಹನ್ನೊಂದನೆಯ ಆಟಗಾರನಾಗಿ ಬಂದಿದ್ದ ಕಪಿಲ್ ಉಳಿದ ನಾಲ್ಕೂ ಬಾಲ್‌ಗಳನ್ನು ಸಿಕ್ಸರ್ ಎತ್ತಿ ಫಾಲೋ ಆನ್ ತಪ್ಪಿಸಿದ್ದ.

1983ರ ಪ್ರುಡೆನ್ಷಿಯಲ್ ಕಪ್‌ನಲ್ಲಿ ಜಿಂಬಾಬ್ವೆ ವಿರುದ್ಧ ಆತ ಗಟ್ಟಿಯಾಗಿ ನಿಂತು ಆಡಿ 173 ರನ್ ಗಳಿಸದೇ ಹೋಗಿದ್ದರೆ, ವಿಶ್ವಕಪ್ ನಮ್ಮ ಪಾಲಿಗೆ ಗಗನ ಕುಸುಮ ಆಗುತ್ತಿತ್ತು.

ಅತಿ ಹೆಚ್ಚು ಟೆಸ್ಟ್ ವಿಕೆಟ್ ಪಡೆದು ಆತ ರಿಚರ್ಡ್ ಹ್ಯಾಡ್ಲಿಯ ದಾಖಲೆ ಮುರಿದ. ಇಷ್ಟೆಲ್ಲ ನಿಜಗಳ ನಡುವೆಯೂ ಜನರ ಕಣ್ಣು ಕುಕ್ಕುವುದು ಬೇರೆ ಸಂಗತಿಗಳೇ.

ಕಪಿಲ್‌ದೇವ್ ನಿಖಾಂಜ್‌ನ ಕುಟುಂಬ ಮೂಲತಃ ಪಾಕಿಸ್ತಾನಕ್ಕೆ ಸೇರಿತ್ತು. ದೇಶ ವಿಭಜನೆ ಆದಾಗ ಬರಿಗೈಯಾಗಿ ಬಂದ ಈತನ ಹಿರಿಯರು ಚಂಢೀಗಢದಲ್ಲಿ ಸಾಮಿಲ್ ಆರಂಭಿಸಿದರು. ಮಧ್ಯಮ ವರ್ಗದ ಕುಟುಂಬ. ಆರಕ್ಕೇರದೆ ಮೂರಕ್ಕಿಳಿಯದೇ ಇತ್ತು.

ಕಪಿಲ್‌ದೇವ್ ವಿಶ್ವಮಟ್ಟದ ಕ್ರಿಕೆಟಿಗ ಆದ ಮೇಲೆ ಆತನ ಉದ್ದಿಮೆಗಳು ಹುಟ್ಟಿಕೊಂಡವು. ಚಂಡಿಗಢದಲ್ಲಿ ಹೋಟೆಲ್ ಕಪಿಲ್ ಆರಂಭಿಸಿದ. ಅಲ್ಲೇ ವಾಣಿಜ್ಯ ಸಂಕೀರ್ಣ ಒಂದನ್ನು ಖರೀದಿಸಿದ. ದೇವ್ ಫೀಚರ್ಸ್ ಎಂಬ ಅಂಕಣ ಆರಂಭಿಸಿದ. ಟಿವಿ ಸ್ಟುಡಿಯೋ, ಸ್ಟೇಡಿಯಂಗಳ ಲೈಟಿಂಗ್ ಗುತ್ತಿಗೆ, ಎಸ್ಕಾರ್ಟ್ ಕಂಪೆನಿಯ ನಿರ್ದೇಶಕ, ಹಲವು ದೊಡ್ಡ ಕಂಪೆನಿಗಳ ಸಲಹೆಗಾರ, ದೆಹಲಿಯ ಸುರೇಂದ್ರನಗರದಲ್ಲಿ ದೊಡ್ಡ ಬಂಗಲೆಯ ಒಡೆಯ.. ಹೀಗೆ ನಾನಾ ಮುಖಗಳಲ್ಲಿ ಉದ್ದಿಮೆ ವ್ಯಾಪಿಸಿತು.

ಇದಲ್ಲದೇ ನಾನಾ ಜಾಹೀರಾತು ಮುಂತಾದವುಗಳಿಂದ ಹಣ ಬರತೊಡಗಿತು. ಆದರೆ ಇದೆಲ್ಲಕ್ಕಿಂತ ಮುಖ್ಯವಾಗಿ ಆತ ಪ್ರತಿಷ್ಠಿತ ಬಿ.ಎಂ.ಡಬ್ಲ್ಯು ಕಾರ್‌ನಲ್ಲಿ ತಿರುಗುತ್ತಾ ಭಾರೀ ಮೊತ್ತದ ಬಾಜಿ ಕಟ್ಟುತ್ತಾ ಬಹು ದೊಡ್ಡ ಜೂಜುಕೋರ ಎನಿಸಿಬಿಟ್ಟಿದ್ದ.

ಇಂಥ ಮೆರೆದಾಟ, ಜೂಜುಕೋರತನಗಳೇ ಜನರ ಕಣ್ಣು ಕುಕ್ಕಿದ್ದು. ಬಹುಪಾಲು ಈತನ ಉದ್ದಿಮೆಗಳ ಹಿಂದಿನ ಪ್ರೇರಣೆ ಮತ್ತು ಶಕ್ತಿ ಆತನ ಹೆಂಡತಿ ರೋಮಿ ಆಗಿದ್ದರೂ ಅದನ್ನು ನಂಬಲು ಜನ ತಯಾರಿರಲಿಲ್ಲ. ರೋಮಿ ಭಾರೀ ಶ್ರೀಮಂತ ಕುಟುಂಬದದಿಂದ ಬಂದವಳು. ಉದ್ದಿಮೆಗಳನ್ನು ಯಶಸ್ವಿಯಾಗಿ ನಡೆಸಬಲ್ಲ ಕರ್ತೃತ್ವ ಶಕ್ತಿ ಇರುವವಳು. ಆದರೆ ರೋಮಿ ಯಾರೆಂದು ಅಷ್ಟಾಗಿ ಪರಿಚಯವೇ ಇರದ ಜನಕ್ಕೆ ಇದೆಲ್ಲ ಕಟ್ಟು ಕತೆಯಾಗಿ ತೋರುತ್ತದೆ.

> **'ಅವನು ಅಂಥ ನಿರಪರಾಧಿ ಆಗಿದ್ದರೆ ಬಿಕ್ಕಿ ಬಿಕ್ಕಿ ಅಳುವ ಅವಶ್ಯಕತೆ ಇರಲಿಲ್ಲ.'**
> **- ರಷೀದ್ ಲತೀಫ್**
> ಪಾಕಿಸ್ತಾನದ ಮಾಜಿ ಕ್ರಿಕೆಟ್ ಕ್ಯಾಪ್ಟನ್

ಅದಕ್ಕಿಂತ, ಕಪಿಲ್ ಯಾವುದೇ ಜಾಹೀರಾತು, ಗುತ್ತಿಗೆ, ಸಂಭಾವನೆ ಪಡೆದರೂ ಅದನ್ನು ನಗದು ರೂಪದಲ್ಲಿಯೇ



ಕಪಿಲ್ ಮತ್ತು ಮನೋಜ್ ಪ್ರಭಾಕರ್

ಮುಂದಾಗಿ ಪಡೆಯುತ್ತಾ ಇದ್ದ. ಇದು ಆತನ ರೀತಿ. ಸಾಮಾನ್ಯವಾಗಿ ದೊಡ್ಡ ಮೊತ್ತದ ವ್ಯವಹಾರ ನಡೆದಾಗೆಲ್ಲ ಚೆಕ್ ಮೂಲಕ ಹಣ ಪಾವತಿಸುವುದು ಕ್ರಮ. ಕಪಿಲ್‌ಗೆ ಮಾತ್ರ ಅದೇಕೋ ನಗದು ಇಷ್ಟ ಆಗುತ್ತಿತ್ತು. ಇದೂ ಕೂಡ ಅನುಮಾನಕ್ಕೆ ಕಾರಣ. ದೊಡ್ಡ ಉದ್ದಿಮೆಗಳವರು ನಗದಾಗಿ ಹಣ ಪಾವತಿಸುವುದನ್ನು ಆಡಿಟರ್‌ಗಳು ಒಪ್ಪುವುದಿಲ್ಲ. ಆದರೆ ನಗದು ಹಣ ಪಡೆದ ವ್ಯಕ್ತಿ ಅದನ್ನು ಮರೆಮಾಚಬಹುದಾದ ಎಲ್ಲ ಸಾಧ್ಯತೆಗಳೂ ಇರುತ್ತವೆ. ಅಲ್ಲದೆ ದೊಡ್ಡ ಕಂಪೆನಿಗಳು ನಗದಾಗಿಯೇ ಹಣ ಪಾವತಿಸಿವೆ ಎಂದರೆ, ಅವರ್‍ಯಾರೂ ಸಕ್ರಮವಾಗಿ ಹಣ ನೀಡಿಲ್ಲ ಎಂದೇ ಅರ್ಥ. ಇಂಥ ಮುಚ್ಚುಮರೆಯ ವ್ಯವಹಾರ ಕಪಿಲ್ ಬಗೆಗಿನ ಅನುಮಾನಕ್ಕೆ ಕಾರಣವಾಗುತ್ತವೆ. ನಮ್ಮಲ್ಲಿನ ತೆರಿಗೆ ವ್ಯವಸ್ಥೆಯೇ ತೀರಾ ಸಂಕೀರ್ಣ. ಕಷ್ಟಪಟ್ಟು ಗಳಿಸಿದ ದುಡ್ಡೆಲ್ಲ ಸರ್ಕಾರಕ್ಕೆ ತೆರಬೇಕಲ್ಲ ಎಂಬ ಸಂಕಟಕ್ಕೆ ಇಂಥ ಕದ್ದುಮುಚ್ಚಿ ನಡೆಸುವ ವ್ಯವಹಾರ ಸಾಮಾನ್ಯವಾಗಿ ಎಲ್ಲರೂ ಮಾಡುತ್ತಾರೆ. ಆದರೆ ಕಪಿಲ್‌ನಂಥವರು ಇಂಥ ವ್ಯವಹಾರ ಮಾಡಿದರೆ, ಅದು ಮ್ಯಾಚ್ ಫಿಕ್ಸಿಂಗ್‌ನಂಥ ಪ್ರಕರಣಗಳಿಂದ ಬಂದ ದುಡ್ಡನ್ನು ಮರೆಮಾಚುವ ಯತ್ನ ಯಾಕಾಗಿರಬಾರದು ಎಂಬ ಕೆಟ್ಟ ಅನುಮಾನ ಸಹಜವಾಗಿಯೇ ಬರುತ್ತದೆ.


ಕಪಿಲ್ ಈಗ ಏಕಾಂಗಿ

ಇಂಗ್ಲಿಷ್ ಸರಿಯಾಗಿ ಬಾರದ, ಚಂಡೀಗಢ ಮಧ್ಯಮ ವರ್ಗದ ಕುಟುಂಬದ ವ್ಯಕ್ತಿಯೊಬ್ಬ ತಮ್ಮ ಕಣ್ಣೆದುರೇ ನೋಡು ನೋಡುತ್ತಾ ಬೃಹತ್ತಾಗಿ ಬೆಳೆದು ಶ್ರೀಮಂತನಾದದ್ದು, ಅದನ್ನವನು ಹೆಮ್ಮೆಯಿಂದಲೇ ಪ್ರದರ್ಶಿಸುತ್ತಾ ಹೋದದ್ದು ಕಣ್ಣು ಕುಕ್ಕುತ್ತದೆ.

ಮ್ಯಾಚ್ ಫಿಕ್ಸಿಂಗ್ ಆರೋಪ ಮಾಡಿರುವುದು ಮನೋಜ್ ಪ್ರಭಾಕರ್. ಕಪಿಲ್ ಜೊತೆಯ ಆಟಗಾರ. ಆತನಿಗೂ ತನಗೂ ಅಂಥ ಸ್ನೇಹ ಏನಿರಲಿಲ್ಲ ಎಂದು ಕಪಿಲ್ ಹೇಳುತ್ತಾನೆ. ಇಷ್ಟೊಂದು ಗುರುತರ ಆರೋಪ ಮಾಡಲು ಕಾರಣ ಏನಿರಬಹುದು? ಸುದ್ದಿಯಲ್ಲಿ ಇರುವ ಚಟ. ಕಪಿಲ್‌ನಂಥವನ ವಿರುದ್ಧ ಇಂಥದೊಂದು ಆರೋಪ ಮಾಡಿದರೆ ಖಂಡಿತ ತಾನು ಜನರ ಮೆಚ್ಚುಗೆ ಗಳಿಸಬಹುದು ಎಂಬ ಉದ್ದೇಶವೇ ಇದಕ್ಕೆ ಕಾರಣ ಎಂದು ಹಲವರ ಅಭಿಪ್ರಾಯ.

ಇಂಥ ಮಾತು ನಂಬುವುದು ಕಷ್ಟ. ಮನೋಜ್ ಪ್ರಭಾಕರ್ ಒಂದು ರೀತಿಯಲ್ಲಿ ನತದೃಷ್ಟ. 'ರಿವರ್ಸ್ ಸ್ವಿಂಗ್' ನಂಥ ಬೌಲಿಂಗ್ ತಂತ್ರಗಳನ್ನು ಕಪಿಲ್‌ದೇವ್‌ಗೆ ಕಲಿಸಿಕೊಟ್ಟವನು. ತೀರಾ ಆತ್ಮೀಯತೆ ಇಲ್ಲದೇ ಹೋಗಿದ್ದರೆ, ತನ್ನ ಆಟದ ತಂತ್ರಗಾರಿಕೆಯನ್ನು ಯಾರೂ ಇನ್ನೊಬ್ಬರಿಗೆ ಕಲಿಸಲು ಹೋಗುವುದಿಲ್ಲ.

ಆತ ಆತ್ಮೀಯನಾಗಿರಲಿಲ್ಲಾ ಎಂದು ಕಪಿಲ್ ಹೇಳಿದ್ದೇ ನಿಜ ಎಂದಿಟ್ಟುಕೊಳ್ಳೋಣ. ಹಾಗಾದರೆ ದ್ವೇಷವಾದರೂ ಇರಬೇಕು ಇಂಥ ಆರೋಪ ಮಾಡಲು. ಕಪಿಲ್‌ನನ್ನು ದ್ವೇಷಿಸಬೇಕಾದ ಸಂದರ್ಭವೂ ಮನೋಜ್ ಪ್ರಭಾಕರ್‌ಗಿಲ್ಲ. ಹೀಗಾಗಿ ಸುಳ್ಳು ಹೇಳುತ್ತಾ ಇರುವುದು ಯಾರು? ಎಂಬ ಜಿಜ್ಞಾಸೆಯೂ ಆರಂಭವಾಗುತ್ತದೆ. ಇದೆಲ್ಲ ಬಿಡಿ. ಕಪಿಲ್‌ನಂಥ ವಿಶ್ವಮಟ್ಟದ ಆಟಗಾರ, ಬಿಬಿಸಿಯಂಥ ಟಿವಿ. ಚಾನೆಲ್ ಸಂದರ್ಶನದಲ್ಲಿ ಅತ್ತ ರೀತಿ ಇದೆಯಲ್ಲ ಅದನ್ನು ಯಾರ್‍ಯಾರೂ ಒಪ್ಪುವುದಿಲ್ಲ. ಸಾರ್ವಜನಿಕ ಜೀವನದಲ್ಲಿ ಇರಲು ಬಯಸುವ ವ್ಯಕ್ತಿಗಳಿಗೆ ಆರೋಪಗಳು, ಅವಮಾನಗಳು ತೀರಾ ಸಹಜ. ಅವನ್ನು ಧೈರ್ಯ ಮತ್ತು ಜಾಣ್ಮೆಯಿಂದ ನಿಭಾಯಿಸಬೇಕಾಗುತ್ತದೆ. ಎಂಥ ಸಂದರ್ಭವೇ ಆಗಲಿ ನಾಯಕನಾದ ವ್ಯಕ್ತಿ ಒಂದು ಮಟ್ಟದ ಗಾಂಭೀರ್ಯ ಕಾಯ್ದುಕೊಳ್ಳಬೇಕಾಗುತ್ತದೆ. ಆರೋಪ ಎದುರಾದ ಕೂಡಲೇ 'ದೇಶಕ್ಕಾಗಿ ಏನೆಲ್ಲ ಮಾಡಿದ್ದೇನೆ. ಇಂಥ ಕೆಲಸ ಮಾಡುವುದಕ್ಕಿಂತ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ' ಎಂದೆಲ್ಲ ಪ್ರಲಾಪಿಸುವುದು ಗಟ್ಟಿ ಮಾತಾಗಿ ಸಂವಹನವಾಗುವುದಿಲ್ಲ.

ಈಗ ಆತನ ಆಸ್ತಿಯ ಮೌಲ್ಯ ಇನ್ನೂರು ಕೋಟಿ ರೂಪಾಯಿ ಎಂಬ ಅಂದಾಜಿದೆ. 'ಇದೆಲ್ಲ ಸುಳ್ಳು ಯಾರಾದರೂ ನೂರು ಕೋಟಿ ಕೊಡಲಿ ಎಲ್ಲ ಬಿಟ್ಟುಕೊಡುತ್ತೇನೆ' ಎಂದು ಮಾತಾಡುವುದು ಕಪಿಲ್ ದೇವ್ ಅವರಂಥವರಿಗೆ ಯೋಗ್ಯ ಆಗಿ ಕಾಣುವುದಿಲ್ಲ.

ಅವತ್ತು ಟಿವಿಯಲ್ಲಿ ಕಪಿಲ್‌ನ ಅಳು ಕಂಡವರು ಬೇಸತ್ತರು. ಅದೇಕೋ 'ಅಳುವ ಗಂಡಸನ್ನು ನಂಬಬಾರದು' ಎಂಬ ಮಾತೇ ಜನಕ್ಕೆ ಹೆಚ್ಚು ಪ್ರಸ್ತುತ ಅನಿಸಿಬಿಟ್ಟಿತು. ಉತ್ತರ ಭಾರತ ಜನ 'ಪೈಸೆ ಖಾಯಾ ಹೈ. ಅಬ್ ದೇಖೋ ರೋ ರಹಾ ಹೈ' ಎಂದು ಗೇಲಿ ಮಾಡಿದರು.

ಈಗ ಮತ್ತೊಮ್ಮೆ ಮೊಪಾಸಾನ ಕತೆಗೆ ಬರೋಣ. ಕಪಿಲ್ ಕತೆಯ ರೈತನ ಹಾಗೆ ಕೇವಲ ತುಂಡು ಹಗ್ಗಕ್ಕೇ ಕೈಚಾಚಿದ ವ್ಯಕ್ತಿ ಆಗಿರಬಹುದು. ಆದರೆ ಅವನಿಗಾಗದ ಜನ, ಅದಕ್ಕೆ ಏನೆಲ್ಲ ಬಣ್ಣ ಕಟ್ಟುವುದು ಸಾಧ್ಯ ಎಂಬುದು ಆತನಿಗೆ ಗೊತ್ತಿರಬೇಕು. ಅಂಥ ಸಂದರ್ಭದಲ್ಲಿ ಘನತೆಯಿಂದ, ತನ್ನ ಸ್ಥಾನಮಾನಕ್ಕೆ ತಕ್ಕುದಾದ ರೀತಿಯಲ್ಲಿ ವರ್ತಿಸಿ ಸಮರ್ಥಿಸಿಕೊಳ್ಳುವ ರೀತಿಯನ್ನು ಆತ ತೋರದೇ ಇದ್ದರೆ, ಅದು ಕೇವಲ ಆತನಿಗಾದ ಅವಮಾನ ಅಲ್ಲ. ಕ್ರಿಕೆಟ್‌ನಂಥ ಕ್ರೀಡೆಗೇ ಆದ ಅವಮಾನ.

■ ಸುಹಾಸ

---

**ಲಿಫ್ಟ್ ತಯಾರಿಕೆಗೆ ಹೆಸರು ಮಾಡಿದ ಕಂಪೆನಿ ಓಟಿಸ್. ಅವರ ಸರಕು ಸಾಕಾಣಿಕೆ ಲಾರಿಯ ಬೆನ್ನಿನ ಮೇಲಿರುವ ಬರಹ ಏನು ಗೊತ್ತೆ? 'ಅಪರಿಚಿತರಿಂದ ಲಿಫ್ಟ್ ಪಡೆಯಬೇಡಿ'**

★

**ಬೆಂಗಳೂರಿನ ಲಾರಿ ಮಾಲೀಕರೊಬ್ಬರು ಬನಶಂಕರಿಯ ಭಕ್ತರು. ಎಲ್ಲ ಲಾರಿಗಳೂ ಮೇಲೂ 'ಬನಶಂಕರಿ' ಎಂಬ ದೊಡ್ಡ ಬರಹ ಇರುತ್ತದೆ. ಹಾಗೆ ಮುಂದಿನ ಬಂಪರ್ ಮೇಲೆ ಡ್ರೈವರ್‌ಗಳು 'ರಸ್ತೆ ರಾಜ' ಎಂದು ಬರೆಸಿರುತ್ತಾರೆ. ಹೆಣ್ಣು ಲಾರಿ, ರಸ್ತೆಗಿಳಿದಾಗ ರಾಜ ಆಗುವುದೇ ಸೋಜಿಗ ಅಲ್ಲವೇ?**



ಜಗತ್ತಿನ ಶೇಕಡಾ ಹತ್ತರಷ್ಟು ಜನರ ಜೀವನವನ್ನೇ ಅಸ್ತಮಾ ನರಕವಾಗಿಸಿದೆ. ಹಳ್ಳಿಗಳಿಗಿಂತ ಪಟ್ಟಣದ ಜನರೇ ಈ ಕಾಯಿಲೆಗೆ ಹೆಚ್ಚು ಬಲಿಯಾಗುತ್ತಿದ್ದಾರೆ. ದೊಡ್ಡವರಿಗಿಂತ ಚಿಕ್ಕಮಕ್ಕಳಿಗೇ ಈ ಪೀಡೆ ಜಾಸ್ತಿ. ಇಂಥ ಕಾಯಿಲೆಯ ಪರಿಪೂರ್ಣ ಪರಿಚಯ ಇಲ್ಲಿದೆ.



# ಆಬಾಲ ವೃದ್ಧರನ್ನು ಕಾಡುವ ಅಸ್ತಮಾ

ಇದೊಂದು ವಿಚಿತ್ರ ಕಾಯಿಲೆ. ಜಗತ್ತಿನ ಎಲ್ಲೆಡೆ ಮಿಲಿಯಾಂತರ ಜನ ಅಸ್ತಮಾದಿಂದ ಬಳಲುತ್ತಾರೆ. ಹಳ್ಳಿಗಳಿಗಿಂತ ಪಟ್ಟಣಗಳಲ್ಲಿ ಈ ರೋಗಿಗಳು ಹೆಚ್ಚು. ಸಣ್ಣ ಮಕ್ಕಳಲ್ಲಿ ಬೇಗ ಕಾಣಿಸಿಕೊಳ್ಳುತ್ತದೆ. ಕೂಡಲೇ ಚಿಕಿತ್ಸೆ ಪಡೆಯದೇ ಇದ್ದಲ್ಲಿ, ಕಾಯಿಲೆ ಬಲಿತು, ಜೀವನವಿಡೀ ಕಾಡುತ್ತದೆ. ನಿತ್ಯದ ಜೀವನ ಸಾಗಿಸುವುದೂ ಕಷ್ಟ ಆಗುತ್ತದೆ.

ಕಳೆದ ಮೂರು ದಶಕಗಳಲ್ಲಿ ಅಸ್ತಮಾ ರೋಗಿಗಳ ಸಂಖ್ಯೆ ಶೇ. 7ರಷ್ಟು ಏರಿಕೆ ಆಗಿದೆ. ನಮ್ಮಲ್ಲಿ ಶೇ. ಹತ್ತರಷ್ಟು ಎಳೆಯರು ಅಸ್ತಮಾ ರೋಗಿಗಳು. ಪರಿಸರ ಮಾಲಿನ್ಯ, ಶ್ವಾಸಕೋಶದ ವಾಯುಮಾರ್ಗದ ಸೋಂಕು ಹೆಚ್ಚುತ್ತಿರುವುದು ಇಂಥ ಬೆಳವಣಿಗೆಗೆ ಕಾರಣ. ದೆಹಲಿಯಂಥ ನಗರಗಳಲ್ಲಿ ವಾಯು ಮಾಲಿನ್ಯ ಹೆಚ್ಚು. ಅಲ್ಲಿ ಅಸ್ತಮಾ ರೋಗಿಗಳ ಸಂಖ್ಯೆಯೂ ಜಾಸ್ತಿ.

ಯಾವ ವಯಸ್ಸಲ್ಲೂ ಅಸ್ತಮಾ ದಾಳಿ ನಡೆಸಬಹುದು. ಆದರೆ ಎಳೆಯರಲ್ಲೇ ಇದು ಹೆಚ್ಚು. ಶೇ. 50ರಷ್ಟು ರೋಗಿಗಳಲ್ಲಿ ಬಾಲ್ಯದಲ್ಲಿಯೇ ಇದು ಮೊದಲು ಕಾಣಿಸಿಕೊಂಡಿದೆ. ಯುವಕರಲ್ಲಿ ಯುವತಿಯರಿಗಿಂತ ಹೆಚ್ಚು ಅಸ್ತಮಾ ರೋಗಿಗಳು ಇದ್ದಾರೆ.

ಬಾಲ್ಯದಲ್ಲೇ ಅಸ್ತಮಾಕ್ಕೆ ತುತ್ತಾದವರು ವಯಸ್ಸು ಏರಿದಂತೆ ತೀವ್ರ ಸ್ವರೂಪದ ತೊಂದರೆಗೆ ಈಡಾಗಬಹುದು. ಕೆಲವರಲ್ಲಿ ಅದು ಇದ್ದಕ್ಕಿದ್ದಂತೆ ಕಾಣೆ ಆಗಿ ಮತ್ತೆ ಯಾವಾಗಲೋ ಪುನಃ ವಕ್ಕರಿಸುತ್ತದೆ.

**ಅಸ್ತಮಾ ಎಂದರೇನು?**

ಅಸ್ತಮಾ ಪದದ ಅರ್ಥ 'ಉಸಿರಾಡಲು ಕಷ್ಟ ಆಗುವುದು' ಈ ಕಾಯಿಲೆ ಇರುವವರು ಉಸಿರಾಡಲು ತೀವ್ರ ಕಷ್ಟಪಡಬೇಕಾಗುತ್ತದೆ. ಶ್ವಾಸನಾಳದ ಮಾಂಸಪೇಶಿಗಳಲ್ಲಿ ಉರಿ, ಊತ ಕಾಣಿಸಿಕೊಳ್ಳುತ್ತದೆ. ಗಾಳಿಯನ್ನು ಒಳಗೆಳೆದುಕೊಳ್ಳುವ ಶಕ್ತಿ ಕಡಿಮೆ ಆಗುತ್ತದೆ. ಇದರಿಂದಾಗಿ ದೇಹಕ್ಕೆ ಅಗತ್ಯ ಇರುವ ಆಮ್ಲಜನಕದ ಪೂರೈಕೆ ಕುಂಠಿತವಾಗುತ್ತದೆ.

ಉಸಿರಾಡುವಾಗ ಸಿಳ್ಳೆಯಂತೆ ಸದ್ದು ಬರಬಹುದು. ಕೆಲವರಲ್ಲಿ ಕೆಮ್ಮು ಕಾಣಿಸಿಕೊಳ್ಳಬಹುದು. ಕಾಯಿಲೆ ತೀವ್ರತರವಾದರೆ, ಬಹುಕಾಲದಿಂದ ಇದ್ದರೆ ಶ್ವಾಸ ಮಾರ್ಗದಲ್ಲಿ ಮಾಂಸಪೇಶಿಗಳು ಹಾನಿಗೊಂಡು ಗಾಯದಂಥ ಕಲೆ ಮೂಡಬಹುದು.

**ಕಾರಣಗಳು :** ಅಸ್ತಮಾ ರೋಗಿಗಳ ತೀವ್ರ ಏರಿಕೆ ಇತ್ತೀಚೆಗೆ ಜಾಸ್ತಿ. ಈ ರೋಗದ ಸಂಶೋಧನೆ, ಅಧ್ಯಯನ ಕೂಡ ಹೆಚ್ಚಲು ಇದು ಕಾರಣ.

ಅಸ್ತಮಾಕ್ಕೆ ಎರಡು ಮುಖ್ಯ ಕಾರಣ ಎಂದು ಗುರುತಿಸಲಾಗಿದೆ. ಒಂದನ್ನು ಬೀಟಾ ಬ್ಲಾಕೇಡ್ ಸಿದ್ಧಾಂತ ಎನ್ನುತ್ತಾರೆ. ಇಲ್ಲಿ ದೇಹದ ನರವ್ಯವಸ್ಥೆಯ ದೋಷ ಇರುತ್ತದೆ. ಇನ್ನೊಂದು ಅಲರ್ಜಿ ಸಿದ್ಧಾಂತ. ದೇಹದ ರೋಗ ನಿರೋಧಕ ಶಕ್ತಿಗೆ ಸಂಬಂಧಿಸಿದ್ದು ಇದು.

**ನರಗಳ ಅವ್ಯವಸ್ಥೆ :** ದೇಹದಲ್ಲಿ ನರವ್ಯವಸ್ಥೆ ಇದೆ. ಮೆದುಳು, ಬೆನ್ನು ಮೂಳೆ ಹಾಗೂ ನರಮಂಡಲ ಇದರ ಅಂಗಗಳು. ಮೆದುಳು, ಬೆನ್ನುಮೂಳೆ ಕೇಂದ್ರ ನರಮಂಡಲದ ಮುಖ್ಯ ಕೇಂದ್ರಗಳು. ಈ ನರಮಂಡಲದ ಹೊರವಲಯದಲ್ಲಿ ಉಳಿದ ನರವ್ಯೂಹ ಇದೆ.

ದೇಹದ ಎಲ್ಲೆಡೆ ಹರಡಿರುವ ನರಗಳು ಯಾವುದೇ ಭಾಗಕ್ಕೆ ಹಾನಿಯಾದಾಗ ಮೆದುಳಿಗೆ ಸಂದೇಶ ರವಾನಿಸುತ್ತವೆ.

ಅದಕ್ಕೆ ತುರ್ತಾಗಿ ಏನು ಪರಿಹಾರೋಪಾಯ ಕೈಗೊಳ್ಳುವುದೆಂದು ಮೆದುಳು, ಬೆನ್ನು ಮೂಳೆಯ ನರ ಕೇಂದ್ರಕ್ಕೆ ಸೂಚನೆ ನೀಡುತ್ತದೆ.

ಈ ಸೂಚನೆ ಕಾರ್ಯರೂಪಕ್ಕೆ ತರುವ ನರವ್ಯೂಹವನ್ನು ಸಹಾನುಭೂತಿಯ ನರವ್ಯೂಹ ಎನ್ನುತ್ತಾರೆ. ಹೃದಯದ ಬಡಿತ ಹೆಚ್ಚಿಸುವುದು. ಅಪಾಯಕ್ಕೆ ತುತ್ತಾದ ದೇಹ ಭಾಗದ್ದೇ ಅಗತ್ಯ ಸಾಮಗ್ರಿ ರವಾನಿಸುವಂತೆ ಮಾಡುವುದು ಇದರ ಕೆಲಸ. ಇದರ ಹಾಗೆ ಇನ್ನೊಂದು ನರವ್ಯೂಹ ಇದೆ. ಅದನ್ನು ಅರೆ ಸಹಾನುಭೂತಿಯ ನರವ್ಯೂಹ ಎನ್ನುತ್ತಾರೆ. ಇದು ಮನುಷ್ಯ ನಿದ್ದೆಯಲ್ಲಿರುವಾಗ ದೇಹದ ಸರಿಯಾದ ನಿರ್ವಹಣೆ ನೋಡಿಕೊಳ್ಳುವ ಕೆಲಸ ಮಾಡುತ್ತದೆ. ಬಹಳಷ್ಟು ಸಂದರ್ಭಗಳಲ್ಲಿ ಸಹಾನುಭೂತಿಯ ನರವ್ಯವಸ್ಥೆ ಮಾಡುವ ಕೆಲಸಕ್ಕೆ ತದ್ವಿರುದ್ಧ ಕೆಲಸವನ್ನು ಅರೆ ಸಹಾನುಭೂತಿಯ ನರವ್ಯವಸ್ಥೆ ಮಾಡುತ್ತದೆ.

ಉದಾಹರಣೆಗೆ ಅಸ್ತಮಾ ಕಾಣಿಸಿಕೊಂಡಾಗ ಗಾಳಿ ಸರಾಗವಾಗಿ





ಶ್ವಾಸಕೋಶ ಕಾರ್ಯ ನಿರ್ವಹಿಸುವ ವಿಧಾನ

ಒಳಬಂದು ಹೋಗಲು ಶ್ವಾಸಮಾರ್ಗ ವಿಕಸನಕ್ಕೆ ಸಹಾನುಭೂತಿ ನರ ಆದೇಶಿಸುತ್ತದೆ. ಅದೇ ಅರೆ ಸಹಾನುಭೂತಿ ನರ ಶ್ವಾಸಮಾರ್ಗ ಅಕುಂಚನಗೊಳ್ಳುವಂತೆ ಆದೇಶಿಸುತ್ತದೆ. ಎರಡೂ ವ್ಯೂಹಗಳು ಸಮ ಶಕ್ತಿಯವಾಗಿದ್ದರೆ ಅಂಥ ತೊಂದರೆ ಇಲ್ಲ. ಅಸ್ತಮಾ ರೋಗಿಗಳಲ್ಲಿ ಅರೆ ಸಹಾನುಭೂತಿ ನರವ್ಯವಸ್ಥೆ ಪ್ರಬಲವಾಗಿರುತ್ತದೆ. ಹೀಗಾಗಿ ತೊಂದರೆ ಎಂದು ಅಧ್ಯಯನ ನಡೆಸಿದವರು ಹೇಳುತ್ತಾರೆ.

ಇದಲ್ಲದೇ ನರಗಳು ಹೊರ ಸೂಸುವ ರಾಸಾಯನಿಕಗಳಿಂದಲೇ ಅಸ್ತಮಾ ಉಂಟಾಗುತ್ತದೆಂದೂ ಹೇಳಲಾಗುತ್ತದೆ. ದೇಹದಲ್ಲಿ ಅಪಾಯ ತಲೆದೋರಿದಾಗ ನರಗಳು ಸುದ್ದಿ ತಲುಪಿಸುವುದು ರಾಸಾಯನಿಕ ಬಿಡುಗಡೆ ಮಾಡುವ ಮೂಲಕ. ಇದನ್ನು ನ್ಯೂರೋ ಟ್ರಾನ್ಸ್‌ಮೀಟರ್ ಎನ್ನುತ್ತಾರೆ. ಒಂದೊಂದು ಅಂಗದ ನರವೂ ಒಂದೊಂದು ಬಗೆಯ ರಾಸಾಯನಿಕ ಬಿಡುಗಡೆ ಮಾಡುತ್ತದೆ. ಸಹಾನುಭೂತಿಯ ನರಗಳು ಎಪಿನೆಫ್ರೀನ್ ಅಥವಾ ಆಡ್ರೀನಲೀನ್ ಎಂಬ ರಾಸಾಯನಿಕ ಬಿಡುಗಡೆ ಮಾಡಿದರೆ, ಅರೆ ಸಹಾನುಭೂತಿ ನರ ಅಸಿಟೈಲ್‌ಕಾಲಿನ್ ಎಂಬ ರಾಸಾಯನಿಕ ಬಿಡುಗಡೆ ಮಾಡುತ್ತದೆ.

ಇಂಥ ಸಂದೇಶಕ್ಕೆ ಪ್ರತಿಕ್ರಿಯೆ ನೀಡಲು ನರದ ತುದಿಯಲ್ಲಿ ಸ್ವೀಕೃತಿ ಕೇಂದ್ರಗಳು ಇರುತ್ತವೆ. ಇವುಗಳಲ್ಲಿ ಮೂರು ಬಗೆಯವು. ಅವನ್ನು ಆಲ್ಫಾ, ಬೀಟಾ ಮತ್ತು ಬೀಟಾ2 ಎಂದು ಕರೆಯುತ್ತಾರೆ. ಇವು ದೇಹದ ಕ್ರಿಯೆಗಳನ್ನು ನಿಯಂತ್ರಿಸುತ್ತವೆ. ಅದರಲ್ಲೂ ಹೃದಯದ ಬಡಿತ, ರಕ್ತದ ಒತ್ತಡ ಮತ್ತು ಉಸಿರಾಟದ ನಿಯಂತ್ರಣ ಇವುಗಳ ಮುಖ್ಯ ಕೆಲಸ.

ಆಲ್ಫಾ ಸ್ವೀಕೃತಿ ನರ ತುದಿ ಹೃದಯದ ಬಡಿತ ಹಾಗೂ ಉಸಿರಾಟದ ಮೇಲೆ ನಿಯಂತ್ರಣ ಇರಿಸಿಕೊಂಡಿದೆ. ಆದರೆ ಅಸ್ತಮಾ ದಾಳಿ ನಡೆದಾಗ ಇದರ ಪಾತ್ರ ತೀರಾ ಕಡಿಮೆ.

ಬೀಟಾ ಕೇಂದ್ರ ಹೃದಯ ನಿಯಂತ್ರಿಸುತ್ತಿದ್ದು ಅಗತ್ಯವಾದಾಗ ಹೃದಯದ ಬಡಿತ ಮತ್ತು ರಕ್ತದ ಒತ್ತಡ ಹೆಚ್ಚಿಸುತ್ತದೆ. ಅಸ್ತಮಾ ಕಾಯಿಲೆ ಇರುವವರಲ್ಲಿ ಬೀಟಾ ಕೇಂದ್ರ ಅಸ್ತವ್ಯಸ್ತಗೊಂಡಿದ್ದು, ಅರೆ ಸಹಾನುಭೂತಿ ನರಮಂಡಲ ಮೇಲುಗೈ ಪಡೆದಿರುತ್ತದೆ ಎಂದು ಅಧ್ಯಯನಗಳು ತಿಳಿಸಿವೆ.

ಅಲರ್ಜಿ : ದೇಹದ ರೋಗ ನಿರೋಧಕ ವ್ಯವಸ್ಥೆಯಲ್ಲಿ ಮೊಟ್ಟೆ ಆಕಾರದ ಲಿಂಫ್‌ಗಳು, ಮೂಳೆಯೊಳಗಿನ ಕೊಬ್ಬು ಹಾಗೂ ಥೈಮಸ್ ಗ್ರಂಥಿ ಪ್ರಮುಖಪಾತ್ರ ವಹಿಸುತ್ತವೆ. ಲಿಂಫ್‌ಗಳು ಸೋಸುವ ಯಂತ್ರದಂತೆ ಕೆಲಸ ನಿರ್ವಹಿಸಿ ರೋಗ ಪಡೆಯುತ್ತವೆ. ಮೂಳೆಯ ಒಳಗಡೆ ಇರುವ ಕೊಬ್ಬು ಇನ್ನೊಂದು ರೀತಿಯಲ್ಲಿ ರೋಗ ತಡೆಗೆ ಸಹಾಯಕ. ಥೈಮಸ್ ಗ್ರಂಥಿ ಎದೆ ಮೂಳೆಯ ಮೇಲು ಭಾಗದ ಹಿಂದೆ ಇದ್ದು, ಸೋಂಕು ತಡೆಯನ್ನು ನಿಯಂತ್ರಿಸುತ್ತದೆ.

ಇವು ಮೂರೂ ಬಿಳಿ ಮತ್ತು ಕೆಂಪು ರಕ್ತಕಣಗಳನ್ನು ತಯಾರಿಸುತ್ತವೆ. ಕೆಂಪುರಕ್ತ ಕಣಗಳು ಶ್ವಾಸಕೋಶದಿಂದ ಆಮ್ಲಜನಕವನ್ನು ದೇಹದ ಎಲ್ಲೆಡೆಗೆ ಹೊತ್ತು ಸಾಗಿಸಿ, ಆ ಭಾಗಗಳಿಂದ ಇಂಗಾಲದ ಡೈ ಆಕ್ಸೈಡನ್ನು ಶ್ವಾಸಕೋಶಕ್ಕೆ ತಂದು ಬಿಡುತ್ತವೆ. ಬಿಳಿ ರಕ್ತ ಕಣಗಳು ರೋಗ ನಿರೋಧಕ ಕೆಲಸ ಮಾಡುತ್ತವೆ. ಅವುಗಳಲ್ಲಿ ಹಲವು ವಿಧ. ಲಿಂಫೋಸೈಟ್ ಎಂಬುದು ಒಂದು ಬಗೆ. ಅವುಗಳಲ್ಲೂ ಬಿ ಹಾಗೂ ಟಿ ಜೀವಕೋಶಗಳೆಂದು ಎರಡು ಬಗೆ. ಟಿ ಜೀವಕೋಶಗಳು ಸೈಟೋಕೀನ್ಸ್ ಎಂಬ ರಾಸಾಯನಿಕ ಬಿಡುಗಡೆ ಮಾಡಿ ರೋಗ ತಡೆಯುತ್ತವೆ. ಬಿ ಜೀವ ಕೋಶಗಳು ರೋಗ ನಿರೋಧಕಗಳನ್ನು ಬಿಡುಗಡೆ ಮಾಡುತ್ತವೆ. ಅವು ರೋಗಕಾರಕಗಳನ್ನು ಗುರುತಿಸಿ ನಾಶಮಾಡುತ್ತವೆ.

ದೇಹದಲ್ಲಿ ಅವ್ಯವಸ್ಥೆ, ಅಸ್ವಸ್ಥತೆ, ಬ್ಯಾಕ್ಟೀರಿಯಾ, ವೈರಸ್ ಅಥವಾ ಹೊರಗಿನ ವಸ್ತುವಿನಿಂದ ಆಗಬಹುದು.

ರೋಗ ನಿರೋಧಕಗಳು ರೋಗಕ್ಕೆ ಕಾರಣವಾಗುವ ಎಲ್ಲವನ್ನು ನಾಶ ಮಾಡುತ್ತವೆ. ಅದನ್ನು ನೆನಪಿಟ್ಟುಕೊಂಡು ಮತ್ತೊಮ್ಮೆ ದಾಳಿ ನಡೆದಾಗಲೂ ತಕ್ಷಣವೇ ಎದುರಿಸಲು ಸಜ್ಜಾಗುತ್ತವೆ. ಇದರಿಂದಾಗಿ ರೋಗ ಮರುಕಳಿಸುವುದು ತಪ್ಪುತ್ತದೆ.

ರೋಗಕಾರಕ ದೇಹದೊಳಗೆ ಪ್ರವೇಶಿಸುತ್ತಿದ್ದಂತೆ ಟಿ ಜೀವಕೋಶ ಅದನ್ನೆದುರಿಸಲು ಸಜ್ಜಾಗುತ್ತದೆ. ಅಂಥ ರೋಗಕಾರಕಗಳನ್ನು ಕೊಲ್ಲುತ್ತಲೇ ಬಿ ಜೀವಕೋಶಕ್ಕೆ ಸಂದೇಶ ರವಾನೆ ಆಗುತ್ತದೆ. ರೋಗಕಾರಕ ಯಾವುದೆಂದು ಗುರುತಿಸಿ ಅದನ್ನು ನಿರ್ಮೂಲನ ಮಾಡಲು ಸರಿಯಾದ ರಾಸಾಯನಿಕ ಬಿಡುಗಡೆ ಮಾಡುವುದು ಬಿ ಜೀವಕೋಶದ ಕೆಲಸ. ಅದು ನಿರ್ದಿಷ್ಟ ರೋಗನಿರೋಧಕ ಹೆಚ್ಚು ಹೆಚ್ಚು ತಯಾರಿಸಲು ಮೂಳೆಯೊಳಗಿನ ಕೊಬ್ಬಿಗೆ ಆದೇಶ ನೀಡುತ್ತದೆ. ದೇಹದೊಳಗೆ ಎಲ್ಲೆಡೆ ಈ ರೋಗ ನಿರೋಧಕ ವ್ಯಾಪಿಸುತ್ತದೆ. ನಾನಾ ರೋಗಗಳಿಗೆ ನಾನಾ ರೋಗ ನಿರೋಧಕ. ಹಾಗೆ ಬಳಕೆ ಆಗುವ ಒಂದು ರಾಸಾಯನಿಕ 'ಇಮ್ಯುನೋಗ್ಲಾಬ್ಯುಲಿನ್-ಇ' ಇದು ದೇಹಕ್ಕೆ ಒಳ್ಳೆಯದಲ್ಲ. ಕೆಲವು ಸಲ ಬಿ ಜೀವಕೋಶ ಅಗತ್ಯಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಇಮ್ಯುನೋಗ್ಲಾಬಿನ್-ಇ ತಯಾರಿಸುವುದರಿಂದ ಅಲರ್ಜಿ ಉಂಟಾಗಿ, ಅಸ್ತಮಾ ಕಾಣಿಸಿಕೊಳ್ಳುತ್ತದೆ.

ಇದಲ್ಲದೆ ಪ್ರತಿ ದೇಹದಲ್ಲೂ ಮಾಸ್ಟ್ ಜೀವಕೋಶಗಳು ಮಿಲಿಯಾಂತರ ಸಂಖ್ಯೆಯಲ್ಲಿ ಇರುತ್ತವೆ. ಎಲ್ಲಿಯೇ ಸೋಂಕು ತಗುಲಿದರೂ ಅದನ್ನು ನಿವಾರಿಸಲು ಕೆಲಸ ಮಾಡಬೇಕಾದದ್ದು ಈ ಜೀವಕೋಶಗಳ ಕೆಲಸ. ಇವು ಮೂಗು, ಶ್ವಾಸಕೋಶ ಹಾಗೂ ಚರ್ಮದ ಕೆಳ ಪದರದಲ್ಲೂ ಇರುತ್ತವೆ. ಗಾಯ, ಉರಿ, ಹೊರಗಿನ ವಸ್ತು ದೇಹದೊಳಗೆ ಪ್ರವೇಶಿಸಿದಾಗ ಅದರ ನಿವಾರಣೆಗೆ ಮೂರು ಬಗೆಯ ರಾಸಾಯನಿಕಗಳನ್ನು ಇವು

### ಅಸ್ತಮಾ ಪ್ರೇರಿಸುವ ಕೆಲವು ಆಹಾರಗಳು

ಬಿಯರ್, ವೈನ್, ವಿನೆಗರ್, ಉಪ್ಪಿನಕಾಯಿ, ಚೀಸ್ (ಗಿಣ್ಣು), ಒಣಗಿದ ಹಣ್ಣು, ತರಕಾರಿ, ಹಣ್ಣಿನ ರಸ, ರಕ್ಷಿಸಿಟ್ಟ ಹಣ್ಣುಗಳು, ಜೆಲ್ಲಿ (ಇವುಗಳಲ್ಲಿ ಬಣ್ಣಕ್ಕಾಗಿ ಸಲ್ಫೈಟ್ ಬಳಸಿರುತ್ತಾರೆ)

ಬೆಣ್ಣೆ, ಗಿಣ್ಣು (ಚೀಸ್), ಡಬ್ಬಿಯಲ್ಲಿಟ್ಟ ಹಣ್ಣುಗಳು, ಐಸ್‌ಕ್ರೀಂ, ಸಾಸಿವೆ, ಚಿಪ್ಸ್, ಕ್ಯಾಂಡಿ/ಚಾಕೋಲೇಟ್, ಕಾಫ್ ಸಿರಪ್‌ಗಳು (ಇವುಗಳಲ್ಲಿ ಹಳದಿ ಬಣ್ಣ ಬರಲು ಟಾರ್ಟ್ರಾಜೀನ್ ಎಂಬ ರಾಸಾಯನಿಕ ಬಳಸಿರುತ್ತಾರೆ)

ಬಿಡುಗಡೆ ಮಾಡುತ್ತವೆ. ಇದರಿಂದ ಗಾಯದ ರಕ್ತ ಹೆಪ್ಪುಗಟ್ಟಿ, ಅದನ್ನು ಮಾಗಿಸುವ ಕಾರ್ಯ ಆಗುತ್ತದೆ. ಹಾಗೇ ಬೇರೆ ಬೇರೆ ದಾಳಿಗಳಿಗೂ ಪ್ರತಿಕ್ರಿಯೆ ಆ ಸಂದರ್ಭಕ್ಕೆ ಅನುಸಾರವಾಗಿ ಇರುತ್ತದೆ. ಈ ಜೀವಕೋಶಗಳು ಬಿಡುಗಡೆ ಮಾಡುವ ಮೂರು ರಾಸಾಯನಿಕಗಳು ಇಮ್ಯುನೋಗ್ಲಾಬಿನ್-ಇ ಜೊತೆ ಸೇರಿ ಮೂಗು, ಶ್ವಾಸಕೋಶಗಳಲ್ಲಿ ಅಲರ್ಜಿ ಸಂದರ್ಭಗಳಲ್ಲಿ ಅಗತ್ಯಕ್ಕಿಂತ ಹೆಚ್ಚು ಸಕ್ರಿಯ ಆಗಿಬಿಡುತ್ತವೆ. ಆಗಿ ಉರಿ, ಊತ ಕಾಣಿಸಿಕೊಂಡು ಮೂಗು, ಶ್ವಾಸಕೋಶಗಳೊಳಗಿನ ಮಾಂಸ ಪೇಶಿಗಳು ಕೆಂಪು ಹಾಗೂ ಮೃದುವಾಗುತ್ತವೆ. ಜೊತೆಗೆ ಜಾಸ್ತಿ ಮ್ಯೂಕಸ್ ಬಿಡುಗಡೆ ಆಗಿ ಗಾಳಿಯಾಡಲು ಜಾಗವೇ ಇರದಂತಾಗುತ್ತದೆ. ಹಾಗಾದಾಗಲೂ ಅಸ್ತಮಾ ಕಾಣಿಸಿಕೊಳ್ಳಬಹುದು.



ಆರೋಗ್ಯವಂತರ ರಕ್ತನಾಳದಲ್ಲಿ ಇರುವ ವಾಯುಮಾರ್ಗ



ಅಸ್ತಮಾ ರೋಗಿಯ ರಕ್ತನಾಳದಲ್ಲಿ ಸಂಕುಚಿತಗೊಂಡಿರುವ ವಾಯುಮಾರ್ಗ

**ಅಸ್ತಮಾ ಲಕ್ಷಣಗಳು :** ಉಸಿರಾಡಲು ಕಷ್ಟವಾಗುತ್ತದೆ. ಉಸಿರು ಹೊರಬರುವಾಗ ಸಿಳ್ಳೆಯಂಥ ಸದ್ದು ಕೇಳುತ್ತದೆ. ಕೆಲವರಲ್ಲಿ ಕೆಮ್ಮು ಕಾಣಿಸಿಕೊಳ್ಳಬಹುದು.

ಅಸ್ತಮಾದ ಲಕ್ಷಣ ಸದಾ ಇರುವುದಿಲ್ಲ. ಆಗಾಗ ಕಾಣಿಸಿಕೊಳ್ಳುತ್ತವೆ. ಪ್ರತಿವ್ಯಕ್ತಿಯಲ್ಲೂ ಇದು ಕಾಣಿಸಿಕೊಳ್ಳುವ ಅವಧಿ ಭಿನ್ನವಾಗಿರುತ್ತದೆ. ಕೆಲವರಿಗೆ ಏಕಾಏಕಿ ಕರಾವಳಿ ತೀವ್ರವಾಗುವ ಅಸ್ತಮಾ, ಇನ್ನು ಕೆಲವರಲ್ಲಿ ಕಾಣಿಸಿಕೊಂಡು ನಿಧಾನವಾಗಿ ತೀವ್ರವಾಗುತ್ತಾ ಹೋಗುತ್ತದೆ.

ಆರಂಭದಲ್ಲಿಯೇ ಸೂಕ್ತ ಚಿಕಿತ್ಸೆ ಮಾಡಿಸುವುದು ಅತ್ಯಗತ್ಯ. ಇಲ್ಲವಾದಲ್ಲಿ ರೋಗ ಬಲಿತು, ಪದೇ ಪದೇ ಕಿರಿಕಿರಿಗೆ ಗುರಿ ಆಗಬೇಕಾಗುತ್ತದೆ. ದೈನಂದಿನ ಜೀವನ ನಡೆಸುವುದೇ ಕಷ್ಟವಾಗುತ್ತದೆ.

**ಅಸ್ತಮಾ ಪ್ರೇರಕಗಳು :** ಅಸ್ತಮಾ ಕೆರಳಲು ನಾನಾ ವಸ್ತುಗಳು ಕಾರಣ ಆಗಬಹುದು. ಆಸ್ಪಿರೀನ್‌ನಂಥ ಮಾತ್ರೆ ಸೇವನೆ ಕೂಡ ಅಸ್ತಮಾ ರೋಗಿಗಳಲ್ಲಿ ದುಷ್ಪರಿಣಾಮ ಬೀರುತ್ತದೆ. ತೀವ್ರ ಕಾಯಿಲೆ ಇರುವ ವಯಸ್ಸಾದವರು ಆಸ್ಪರೀನ್ ಅಥವಾ ಆ ಬಗೆಯ ಮಾತ್ರೆಗಳಿಂದ ದೂರ ಇರುವುದು ಒಳ್ಳೆಯದು.

ಪರ್‌ಫ್ಯೂಮ್, ಯಾವುದೇ ಬಗೆಯ ಹೊಗೆ, ಧೂಳು, ಕೆಲವು ಬಗೆಯ ಆಹಾರ, ಪಾನೀಯ, ಆಹಾರಕ್ಕೆ ಬಣ್ಣ ನೀಡುವ ರಾಸಾಯನಿಕಗಳು, ಹವಾಮಾನದಲ್ಲಿನ ಏರುಪೇರು ಕೂಡ ಅಸ್ತಮಾಗೆ ಪ್ರೇರಕವಾಗಬಹುದು.

### ವೃತ್ತಿಯಿಂದಾಗಿ ಬರುವ ಅಸ್ತಮಾ

- ಕಾರ್ಖಾನೆ ಕೆಲಸ : ಅಲ್ಯುಮಿನಿಯಂ, ಫ್ಲೋರೈಡ್, ಆಂಟಿಬಯಾಟಿಕ್‌ಗಳು
- ಕೃಷಿ: ಧಾನ್ಯಗಳ ಧೂಳು, ಕೋಳಿಗೂಡಿನ ನುಸಿಗಳು, ಪರಾಗ, ಮರದ ಹೊಟ್ಟು.
- ರಕ್ಷಣಾ ಇಲಾಖೆ : ಮಸ್ಟರ್ಡ್‌ಗ್ಯಾಸ್, ಅರ್ಸೆನಿಕ್ ಇರುವ ವಸ್ತುಗಳು.
- ರಿಫೈನರಿ : ಕ್ಲೋರೀನ್ ಅನಿಲ, ಪ್ಲಾಟಿನಂ ರಾಸಾಯನಿಕಗಳು, ವನೆಡಿಯಂ
- ಹಡಗು ನಿರ್ಮಾಣ, ಬಂದರು : ಟಾಲ್ಯೂನ್, ಡೈಸೋ ಸಯನೈಡ್, ಬೂಸ್ಟು, ಪಾಟಿ, ಕೀಟಗಳು, ಧಾನ್ಯಗಳ ಧೂಳು.
- ಜವಳಿ : ಹತ್ತಿ, ಉಣ್ಣೆ ಧೂಳು.
- ಬ್ಯೂಟಿ ಪಾರ್ಲರ್ : ಪರ್‌ಸಲ್ಫೈಟ್, ಫ್ಲೋರೋಕಾರ್ಬನ್

ಕೆಲವು ಶಿಶುಗಳಿಗೆ ಹಸುವಿನ ಹಾಲು ಕೂಡ ಒಗ್ಗುವುದಿಲ್ಲ. ಬಲವಂತವಾಗಿ ಅದನ್ನು ಕುಡಿಸಲು ಯತ್ನಿಸಿದರೆ ಮೊದಲು ಅಲರ್ಜಿ ಕಾಣಿಸಿಕೊಳ್ಳುತ್ತದೆ. ಆನಂತರ ಅದು ತೀವ್ರವಾದಾಗ ಅಸ್ತಮಾಗೆ ಕಾರಣವಾಗುತ್ತದೆ.

ಹಾಗೇ ಮೀನು, ಜಿರಲೆ, ಜಿರಲೆ ಮೊಟ್ಟೆ, ಸಮುದ್ರ ಉತ್ಪನ್ನ, ಇಂಥ ಯಾವುದರಿಂದಾದರೂ ಅಸ್ತಮಾ ಬರಬಹುದು. ಪ್ರತಿ ವ್ಯಕ್ತಿಗೂ ಒಂದೊಂದು ವಸ್ತು, ಆಹಾರ, ವಾತಾವರಣದಲ್ಲಿನ ಅಂಶ ಅಸ್ತಮಾ ಪ್ರೇರಿಸುತ್ತದೆ. ಅದು ಯಾವುದೆಂದು ಗುರುತಿಸಿ, ಅದರಿಂದ ದೂರ ಇರುವುದೇ ಉತ್ತಮ ಉಪಾಯ.

ಕೆಲವರಿಗೆ ಚಾಕೋಲೇಟ್ ತಿಂದರೇ ಅಸ್ತಮಾ ಕೆರಳುತ್ತದೆ ಎಂಬುದು ವಿಚಿತ್ರವಾಗಿ ಕಂಡರೂ ಸತ್ಯ.

ಹಾರ್ಮೋನುಗಳಲ್ಲಿ ಏರುಪೇರಿಂದಲೂ ಅಸ್ತಮಾ ತೀವ್ರವಾಗುತ್ತದೆ. ಮಹಿಳೆಯರಿಗೆ ಮುಟ್ಟಿನ ದಿನಗಳಲ್ಲಿ, ಹೆರಿಗೆ ಸಮಯದಲ್ಲಿ ಇದು ತೀವ್ರವಾಗುವುದೂ ಉಂಟು.

ಅಸ್ತಮಾ ರೋಗ ಇರುವವರು ಕಠಿಣವಾದ, ಶ್ರಮದ ವ್ಯಾಯಾಮ ಮಾಡಿದಾಗಲೂ ಕಾಯಿಲೆ ತೀವ್ರವಾಗುವುದುಂಟು.

**ಅಸ್ತಮಾದ ವಿಚಿತ್ರ :** ಅಸ್ತಮಾ ತೀವ್ರವಾಗುವುದು ನಡುರಾತ್ರಿ ಅಥವಾ ಮುಂಜಾವಿನ ವೇಳೆಯಲ್ಲಿ. ಕೆಮ್ಮಿಂದ ಆರಂಭವಾಗಿ, ವ್ಹೀಜಿಂಗ್ ಹಾಗೂ ಉಸಿರಾಟದ ತೊಂದರೆ ತೀವ್ರವಾಗುತ್ತದೆ. ಇದಕ್ಕೆ ಕಾರಣಗಳೂ ಉಂಟು.

★ ಧೂಳಿನಲ್ಲಿ ವಾಸಿಸುವ ನುಸಿಗಳು ಹಾಸಿಗೆ ಅಥವಾ ಹೊದಿಕೆಯಲ್ಲಿ ಸೇರಿರುತ್ತವೆ. ಕಣ್ಣಿಗೆ ಕಾಣದ ಇವು ರಾತ್ರಿಯಲ್ಲಿ ಉಸಿರಿನ ಮೂಲಕ ಶ್ವಾಸಕೋಶ ಪ್ರವೇಶಿಸಿ ತೊಂದರೆಗೆ ಕಾರಣವಾಗುತ್ತವೆ.

★ ರಾತ್ರಿಯ ತಂಪು ವಾತಾವರಣ ಕೂಡ ಅಸ್ತಮಾ ಕೆರಳಲು ಕಾರಣ.

★ ಅಸ್ತಮಾ ಪ್ರೇರಕಗಳು ದೇಹ ಪ್ರವೇಶಿಸಿದ ಏಳೆಂದು ತಾಸಿನ ನಂತರ ಕಾಯಿಲೆ ಕೆರಳುತ್ತದೆ. ಹಗಲಿನಲ್ಲಿ ಯಾವುದೇ ಅಸ್ತಮಾ ಪ್ರೇರಕ ದೇಹದೊಳಗೆ ಪ್ರವೇಶಿಸಿದ್ದರೂ, ಅದರ ಪರಿಣಾಮ ಕಾಣಿಸಿಕೊಳ್ಳುವಾಗ ರಾತ್ರಿಯಾಗಿರುತ್ತದೆ.

★ ದೇಹದ ಮಾಂಸಪೇಶಿಗಳು ವಿಶ್ರಾಂತಿ ಪಡೆಯಲು ಕೆಲವು ಹಾರ್ಮೋನುಗಳು ರಾತ್ರಿ ಹೊತ್ತು ಶ್ರಮಿಸುತ್ತವೆ. ಈ ಹಾರ್ಮೋನು ಸ್ರವಿಸುವುದು ನಡು ರಾತ್ರಿಯ ನಂತರ ಕಡಿಮೆಯಾಗುತ್ತದೆ. ಆಗ ಶ್ವಾಸಕೋಶಗಳು ತೆರೆದುಕೊಳ್ಳದೇ ಗಾಳಿಯಾಡಲು ಅಡ್ಡಿ ಉಂಟಾಗುತ್ತದೆ.

■ ಡಾ. ಅನಿರುದ್ಧ ಭಂಡಿವಾಡ

---

## ಬರೆಯುವ ಕಲೆ

ಬರೆಯುವುದು ಕಲೆ. ಪ್ರಸಿದ್ಧ ಸಾಹಿತಿ ಸ್ಟೀವನ್‌ಸನ್ ತನ್ನೆಲ್ಲ ಕೃತಿಗಳನ್ನೂ ನಿಂತುಕೊಂಡೇ ಬರೆಯುತ್ತಿದ್ದನಂತೆ. ನಮ್ಮ ನಡುವಿನ ಪ್ರಸಿದ್ಧ ಕಾದಂಬರಿಕಾರ ಇವತ್ತಿಗೂ ತಮ್ಮ ಕೃತಿಗಳನ್ನು ಶಾಲೆಯ ಮಕ್ಕಳ ನೋಟ್ ಬುಕ್‌ನಲ್ಲಿಯೇ ಬರೆಯುತ್ತಾರೆ.



# ಶತಮಾನದ ಬರ

*ಬರಿಗೊಡಗಳಿಗೆ ಸಮಾಧಾನ*
*ಹೇಳುತ್ತಿದೆ ನೀರಿಲ್ಲದ ನಲ್ಲಿ.*

-ಕೆ.ಎಸ್.ನ.

**ಹೊಸ ಸಹಸ್ರಮಾನದ ಸಂಭ್ರಮ ಇನ್ನೂ ಆರಿಲ್ಲ. ಆಗಲೇ ಬಿಸಿ ತಟ್ಟಲು ಆರಂಭವಾಗಿದೆ. ರಾಜಾಸ್ಥಾನ, ಮಧ್ಯ ಪ್ರದೇಶ, ಗುಜರಾತ್, ಆಂಧ್ರ ಪ್ರದೇಶಗಳಲ್ಲಿ ಕುಡಿಯುವ ನೀರಿಗೂ ಜನ ಪರದಾಡುತ್ತಿದ್ದಾರೆ. ಇದೊಂದು ನೈಸರ್ಗಿಕ ದುರಂತ ಎಂದು ಅಧಿಕಾರಿಗಳು ಹೇಳುತ್ತಿದ್ದಾರೆ. ಇದೊಂದು ಹಸೀ ಸುಳ್ಳು, ಇದು ಮನುಷ್ಯನೇ ಕೈಯಾರೆ ತಂದುಕೊಂಡ ವಿಪತ್ತು.**

**1856**ರಲ್ಲಿ ರಾಜಾಸ್ಥಾನದಲ್ಲಿ ಹೀಗೇ ಬರ. ಸಾವಿರಾರು ಜನ ಲಕ್ಷಾಂತರ ದನಕರು ಕೀಟಗಳಂತೆ ಪಟಪಟಿಸಿ ಸತ್ತರು. ಆಗ ಎಚ್ಚೆತ್ತುಕೊಂಡ ಸ್ಥಳೀಯ ರಾಜ ಒಂದು ಸರೋವರ ಕಟ್ಟಿಸಿದ. ಅದರ ಹೆಸರು 'ರಾಜ ಸಮಂದ್'. ಅದರ ಅರ್ಥ 'ರಾಜ ಸಮುದ್ರ' ಎಂದು. ಇತ್ತೀಚಿನವರೆಗೆ ಇದೇ ಸರೋವರದಿಂದ ಪಶ್ಚಿಮ ರಾಜಾಸ್ಥಾನದ ಮೂರು ಜಿಲ್ಲೆಗಳಿಗೆ ನೀರು ಒದಗಿಸಲಾಗುತ್ತಾ ಇತ್ತು. ಕಳೆದ ವರ್ಷದ ಕೊನೆಗೇ ಈ ಸರೋವರ ಬತ್ತಲಾರಂಭಿಸಿತು. ಈಗ ಅಲ್ಲಿ ಕಾಣುವುದು ಬಿರುಕು ಬಿಟ್ಟ ನೆಲ. ಗುಜರಾತ್ ಶ್ರೀಮಂತರ ತವರು. ಅಲ್ಲಿನ ಶ್ರೀಮಂತರು ನೀರಿಗೂ ಹಣ ಕೊಡಬೇಕಾಗುತ್ತದೆ ಎಂದು ಭಾವಿಸಿರಲಿಲ್ಲ. ಕಳೆದ ವರ್ಷ ಪಾರ್ಲಿಮೆಂಟ್ ಚುನಾವಣೆ. ಭಾಷಣ ಮಾಡಲು ಬಂದಿದ್ದ ಅಡ್ವಾಣಿಯನ್ನು 'ಪೆಹಲೆ ಪಾನಿ, ಫಿರ್ ಅಡ್ವಾಣಿ' ಎಂಬ ಘೋಷಣೆಗಳು ಸ್ವಾಗತಿಸಿದ್ದವು. ಅವರೇನೋ ತಲೆ ಕೆಡಿಸಿಕೊಳ್ಳಲಿಲ್ಲ. ವೋಟು ಬಾಚಿಕೊಂಡು ಗೆದ್ದು ಹೋಗಿ ಕೇಂದ್ರ ಗೃಹ ಸಚಿವರಾದರು. ಇಲ್ಲಿನ ಸೌರಾಷ್ಟ್ರ ಕಛ್ ಪ್ರದೇಶಗಳಲ್ಲಿ ರಾಚುವ ಬಿಸಿಲು, ಬಾಯಾರಿಕೆ ತಣಿಸಲು ನೀರಿಲ್ಲ. ಭಾವನಗರ, ಸುರೇಂದ್ರನಗರ, ರಾಜಕೋಟೆಗಳಂಥ ಊರಲ್ಲಿ ಮೂರು ದಿನಕ್ಕೊಮ್ಮೆ ಹದಿನೈದು ನಿಮಿಷ ನೀರು ಪೂರೈಸಲಾಗುತ್ತಿದೆ. ಇದು ರಾವಣಾ ಸುರನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ. ನೀರು ಮಾರುವವರು ಹುಟ್ಟಿಕೊಂಡಿದ್ದಾರೆ. ರಾಜ್‌ಕೋಟೆಯ ಒಂದು ಅಪಾರ್ಟ್‌ಮೆಂಟಿನ ಶ್ರೀಮಂತರು ಲಾರಿಗಳಲ್ಲಿ ನೀರು ತರಿಸಿಕೊಳ್ಳುತ್ತಾರೆ. ಪುಣ್ಯವಂತರು. ಇಡೀ ಅಪಾರ್ಟ್‌ಮೆಂಟಿನ ತಿಂಗಳ ನೀರಿನ ಬಿಲ್ ಎಷ್ಟು ಗೊತ್ತೇ? ಕೇವಲ ಒಂದೂವರೆ ಲಕ್ಷ ರೂಪಾಯಿ. ನೀರಿಗೂ ಒಳ್ಳೆಯ ಬೆಲೆ ಅಲ್ಲವೇ?

ಪಕ್ಕದ ಆಂಧ್ರದ್ದು ಇನ್ನೊಂದು ಕತೆ. ಅಲ್ಲಿನ ಮಹಬೂಬ್‌ನಗರ ಜಿಲ್ಲೆ ಅತ್ಯಂತ ಹಿಂದುಳಿದ ಪ್ರದೇಶ. ಬೆಂಗಾಡು ಇವತ್ತು ಅಲ್ಲಿ ಕುಡಿಯಲು ನೀರಿಲ್ಲ. ಬಿತ್ತಿದ ಬೆಳೆ ಒಣಗುತ್ತಿವೆ. ಗಾಯದ ಮೇಲೆ ಬರೆ ಎಳೆದಂತೆ, ಸಾಲ ನೀಡಿದವರು ತಗಾದೆ ಆರಂಭಿಸಿದ್ದಾರೆ. ಬ್ಯಾಂಕಿಂದ ಪಡೆದ ಸಾಲದ ಕಂತು ತೀರಿಸಲು ಸ್ಥಳೀಯರಿಂದ ಸಾಲ ಪಡೆದವರು ಕಂಗಾಲಾಗಿದ್ದಾರೆ. ಬ್ಯಾಂಕಿನ ಇನ್ನೊಂದು ಕಂತು, ಹಳೇ ಕಂತಿಗಾಗಿ ಮಾಡಿದ ಸಾಲ ಕುತ್ತಿಗೆಯ ನೇಣಾಗಿದೆ. ಏನುಮಲ ಲಂಬಾಣಿ ತಾಂಡಾದ ಇಂಥ ಸಾಲಗಾರನ ಮನೆ ಬಾಗಿಲಿಗೆ ಬಂದ ದುಡ್ಡು ಕೊಟ್ಟವನು ಏನು ಹೇಳಿದ ಗೊತ್ತೇ? 'ನಿನ್ನ ಹೆಂಡತೀನ ಮಾರಿ ಸಾಲ ತೀರಿಸು' ಇಂಥ ಮಾತು ಕೇಳಿಯೂ ಮುಖ ಹೊತ್ತುಕೊಂಡು ತಿರುಗಲಾಗದ ಅವನು ಕೀಟನಾಶಕ ಕುಡಿದು ಆತ್ಮಹತ್ಯೆ ಮಾಡಿಕೊಂಡ. ಈ ವರ್ಷ ಮಹಬೂಬ್ ನಗರ ಜಿಲ್ಲೆಯಲ್ಲಿ ಹೀಗೆ ಆತ್ಮಹತ್ಯೆ ಮಾಡಿಕೊಂಡವರ ಸಂಖ್ಯೆಯೇ 37. ಇನ್ನೊಂದು ಜಿಲ್ಲೆ ನಲ್ಗೊಂಡಾದಲ್ಲಿ ಇನ್ನೊಂದು ಕಥೆ. ಅಲ್ಲಿನ ಲಂಬಾಣಿಗಳು, ಆದಿವಾಸಿಗಳು, ಹಸಿವು ನೀಗಿಸಿಕೊಳ್ಳಲು ಆಗ ತಾನೆ ಹುಟ್ಟಿದ ಹೆಣ್ಣು ಮಕ್ಕಳನ್ನು ಮಾರುತ್ತಿದ್ದಾರೆ. ಅಂಥ ಮಕ್ಕಳ ಬೆಲೆ ಕೇವಲ ಹತ್ತು ಸಾವಿರ ರೂಪಾಯಿ. ಹೈಟೆಕ್ ಮುಖ್ಯಮಂತ್ರಿಯ ಊರಲ್ಲಿ ಇದೊಳ್ಳೇ ಹೈಟೆಕ್ ವ್ಯಾಪಾರ ಅಲ್ಲವೇ?

ಒರಿಸ್ಸಾದ್ದು ಇನ್ನೊಂದು ಕಥೆ. ಮೊನ್ನೆ ತಾನೇ ಚಂಡಮಾರುತ ಬೀಸಿ ಸಮುದ್ರವೇ ಊರುಗಳನ್ನು ಕಬಳಿಸಿತ್ತು. ಕುಂಭ ದ್ರೋಣವಾಗಿ ಸುರಿದ ಮಳೆಯಿಂದ ಎಲ್ಲೆಲ್ಲೂ ನೀರು. ಸಾವಿರಾರು ಜನ ಸತ್ತರು. ಇಡೀ ದೇಶ ಎದ್ದು ಕುಳಿತು ಅಲ್ಲಿ ಉಳಿದವರಿಗೆ ನೆರವಿನ ಕೈ ಚಾಚಿತು. ಚಳಿಯಲ್ಲಿ ನಡುಗುತ್ತಾ, ಮನೆಯಿಲ್ಲದೆ ಬೀದಿ ಪಾಲಾದವರಿಗೆ ಅವತ್ತು ಒಂದು ಬೆಚ್ಚನೆಯ ಕಂಬಳಿ ಸಿಕ್ಕಿದ್ದರೆ ಅದೇ ಸ್ವರ್ಗ. ಸರ್ಕಾರ ಹದಿನೈದು ಲಕ್ಷ ರೂಪಾಯಿ ಬೆಲೆಯ ಕಂಬಳಿಗಳಿಗೆ ತಕ್ಷಣ ಆರ್ಡರು ಮಾಡಿತ್ತು. ಆ ಕಂಬಳಿಗಳ ಮೊದಲ ಕಂತು ಈಗ ಬಂದಿದೆ. ಮೇಲೆ ರಾಚುವ ಬಿಸಿಲು. ಕುಡಿಯಲು ಹನಿ ನೀರಿಲ್ಲ. ಬಾವಿ ತೋಡಿದರೆ ಉಪ್ಪು ನೀರು. ಇಂಥ ಕಾಲಕ್ಕೆ ಕಂಬಳಿ ಎಷ್ಟೊಂದು ಚಂದದ, ವ್ಯಂಗ್ಯದ ಉಡುಗೊರೆ ಅಲ್ಲವೇ?

ಅಷ್ಟು ದೂರ ಏಕೆ? ಬೆಂಗಳೂರಲ್ಲೇ ಈಗ ಎರಡು ದಿನಕ್ಕೆ ಒಂದು ಸಲ ನೀರು ಪೂರೈಸಲಾಗುತ್ತದೆ. ಮೈಸೂರಲ್ಲಿ ಪಂಪು ಕೆಟ್ಟು ಕುಳಿತು ಯಾವಾಗ ಕೈಕೊಡುತ್ತದೋ! ಹೇಳಲು ಬರುವುದಿಲ್ಲ. ಉತ್ತರ ಕರ್ನಾಟಕದ ಕಡೆಯ ನೀರಿನ ಗೋಳು ಹೇಳಿದರೆ ಕಣ್ಣಲ್ಲಿ ನೀರಲ್ಲ, ರಕ್ತ ಬರುತ್ತದೆ. ಅದರ ಒಂದು ಸಣ್ಣ ಸ್ಯಾಂಪಲಿನ ಹಾಗೆ ಕಳೆದ ತಿಂಗಳು ಹಾವೇರಿ ಜಿಲ್ಲೆಯ ಸವಣೂರಲ್ಲಿ ಜನ ದಂಗೆ ಎದ್ದರು. ಸರ್ಕಾರಿ ಕಚೇರಿ, ಜೀಪು, ಕಂಪ್ಯೂಟರ್ ಎಲ್ಲಕ್ಕೆ ಬೆಂಕಿ ಇಟ್ಟರು. ನಮ್ಮವರು ಶಾಂತ ಜನ. ಆದರೆ ಮನುಷ್ಯನ ತಾಳ್ಮೆಗೂ ಮಿತಿ ಇರುತ್ತದೆ. 'ಸಜ್ಜನನಿಗೆ ಸಿಟ್ಟು ಬರಬಾರದು' ಎನ್ನುತ್ತಾರೆ ತಿಳಿದವರು. ಅಂಥ ಸಿಟ್ಟು ಇವತ್ತಲ್ಲ ನಾಳೆ ಕರ್ನಾಟಕದಲ್ಲಿ ಸ್ಫೋಟಗೊಳ್ಳುವುದು ಖಚಿತ.

### ಮೈಸೂರಲ್ಲಿ ಕುಡಿಯುವ ನೀರಿಲ್ಲ!

ಸಮುದ್ರದ ನೆಂಟಸ್ತನ, ಉಪ್ಪಿಗೆ ಬಡತನ ಎಂಬುದು ಗಾದೆ ಮೈಸೂರಿನ ಜನರ ಪಾಲಿಗೆ ಇದು ನಿಜವಾಗುತ್ತಿದೆ. ನಗರದಿಂದ ಎಂಟು ಕಿ.ಮೀ ದೂರದಲ್ಲಿ ಕಾವೇರಿ ನದಿ ಹರಿಯುತ್ತಿದೆ. ಅಲ್ಲಿ ಕೃಷ್ಣರಾಜಸಾಗರ ಅಣೆಕಟ್ಟು ಇದೆ. ಅಲ್ಲಿಂದಲೇ ನಗರಕ್ಕೆ ನೀರು ಸರಬರಾಜು ಆಗುತ್ತದೆ. ಮೇ ಎರಡನೇ ವಾರದಲ್ಲಿ ಮಂಡ್ಯದ ರೈತರು ತಕರಾರು ತೆಗೆದರು. ಬೆಳೆದು ನಿಂತ ಪೈರಿಗೆ ಮೊದಲು ನೀರು ಬಿಡಲು ಆಗ್ರಹ. ಮೈಸೂರಿಗೆ ನೀರು ಪೂರೈಸುವ ಪಂಪಿಂಗ್ ಸ್ಟೇಷನ್ನಿಗೆ ಬೀಗ ಹಾಕಿದರು. ಒಂದು ವಾರ ನಗರದ ಜನ ನೀರಿಲ್ಲದೇ ಪರದಾಡಿದರು. ಈಗ ಎಚ್ಚೆತ್ತ ಸರಕಾರ ತುರ್ತು ಸಂಪುಟ ಸಭೆ ನಡೆಸಿ ಒಂದು ಕೋಟಿ ರೂಪಾಯಿ ಬಿಡುಗಡೆ ಮಾಡಿದೆ. ಕಪಿಲಾ ನದಿಯಿಂದ 150 ಟ್ಯಾಂಕರ್‌ಗಳಲ್ಲಿ ನೀರು ಒದಗಿಸಲು ಮುಂದಾಗಿದೆ. ಇಂಥದೊಂದು ನೀರಿನ ಹಾಹಾಕಾರ ಯಾರಾದರೂ ನಿರೀಕ್ಷಿಸಿದ್ದರೆ!

### ಯೋಜನೆ, ಯೋಜನೆ

ನಮ್ಮ ಅಧಿಕಾರಿಗಳನ್ನು, ರಾಜಕಾರಣಿಗಳನ್ನು ಕೇಳಿ ನೋಡಿ. ದೊಡ್ಡ ದೊಡ್ಡ ಯೋಜನೆಗಳ ಪ್ರವರ, ಅವಕ್ಕೆ ಖರ್ಚು ಮಾಡುತ್ತಿರುವ ಕೋಟಿ ಕೋಟಿ ಹಣದ ಬುರುಡೆ ಪುರಾಣ ಬಿಚ್ಚಿ ಇಡುತ್ತಾರೆ.

ನಿಮಗೆ ಒಂದು ವಿಷಯ ತಿಳಿದಿರಲಿ. ನಮ್ಮಲ್ಲೊಂದು ಹವಾಮಾನ ಇಲಾಖೆ ಎಂಬುದಿದೆ. ಪರಿಣಿತರು, ಅತ್ಯಾಧುನಿಕ ತಂತ್ರಜ್ಞಾನದಿಂದ ಸುಸಜ್ಜಿತ ಇಲಾಖೆ. ನಮಗೆ ಇವರ ಅಸ್ತಿತ್ವ ತಿಳಿಯುವುದು ಮಳೆ ತಡವಾದರೆ, ಚಂಡಮಾರುತ ಬೀಸಿದಾಗ.

ದೆಹಲಿಯಲ್ಲಿ ಪ್ರತಿ ಮಂಗಳವಾರ ಹವಾಮಾನ ತಜ್ಞರು ಒಂದು ಸಭೆ ನಡೆಸುತ್ತಾರೆ. ಅದಕ್ಕೆ ಈ ದೇಶದ ಆಡಳಿತದ ಚುಕ್ಕಾಣಿ ಹಿಡಿದ ಅಧಿಕಾರಿಗಳೆಲ್ಲ ಕಡ್ಡಾಯವಾಗಿ ಹಾಜರಿರಬೇಕು. ಒಮ್ಮೆ ಈರುಳ್ಳಿ ಬೆಲೆ ಗಗನಕ್ಕೇರಿ ಸರ್ಕಾರಗಳೇ ಹಾರಿ ಹೋದ ಮೇಲೆ ಈ ಮೀಟಿಂಗ್ ಜಾರಿಗೆ ಬಂದಿದೆ. ಪ್ರತಿವಾರ ತಜ್ಞರು ಹವಾಮಾನ, ಅದರಿಂದ ವಿವಿಧ ಬೆಳೆಗಳ ಮೇಲಾಗುವ ಪರಿಣಾಮ ಮುಂತಾದ್ದು ವಿವರಿಸುತ್ತಾರೆ. ಅದೆಲ್ಲ ಕೇಳಿಸಿಕೊಂಡ ಅಧಿಕಾರಿಗಳ ದಂಡು, ಅಂಟರದ ಧೂಳು ಕೊಡವಿಕೊಂಡು ಎದ್ದು ಹೋಗುತ್ತಾರೆ. ಮತ್ತೆ ಮಂಗಳವಾರ ಇಂಥದ್ದೇ ಇನ್ನೊಂದು ಮೀಟಿಂಗ್‌ಗೆ ಹಾಜರಾಗುತ್ತಾರೆ.

ಒಂದೇ ಒಂದು ಸಲಕ್ಕೂ ಯಾವನೇ ಅಧಿಕಾರಿ, ಮಳೆಯ ಸ್ಥಿತಿ ಹೀಗಾಗಿದೆ, ಜನರ ಕುಡಿಯುವ ನೀರಿನ ಪರಿಸ್ಥಿತಿ ಏನು? ಎಂದು ಕೇಳಲಿಲ್ಲ. ಅವರೂ ಹೇಳಲಿಲ್ಲ.

ನಮ್ಮ ಅಧಿಕಾರಿಗಳಿಗೆ ಗುರಿ ಸಾಧಿಸುವುದೇ ಪರಮ ಉದ್ದೇಶ. ಆಹಾರ ಧಾನ್ಯದ ಮೂಲ ದಾಸ್ತಾನು. ಕನಿಷ್ಠ 46 ಮಿಲಿಯನ್ ಟನ್‌ಗಳಷ್ಟು ಇರಬೇಕು ಎಂದು ಸರ್ಕಾರ ಸೂಚಿಸಿತು. ಇವರು 124 ಮಿಲಿಯನ್ ಟನ್ ಸಂಗ್ರಹಿಸಿ ಇಟ್ಟು ತಮ್ಮ ಬೆನ್ನು ತಾವೇ ಚಪ್ಪರಿಸಿಕೊಂಡರು. ಅಲ್ಲಿ ಹೊಟ್ಟೆಗಿಲ್ಲದೆ ಜನ ಸಾಯುತ್ತಾ ಇದ್ದಾರೆ. ಇವರು ಇಲ್ಲಿ ದಾಸ್ತಾನು ಇಟ್ಟುಕೊಂಡು, ದನದ ಗೋದಲಿಯಲ್ಲಿ ಮಲಗಿದ ನಾಯಿಗಳ ಹಾಗೆ ಆಡುತ್ತಿದ್ದಾರೆ.


ಭಾರತದ ಒಣ ಹಾಗೂ ಅರೆ ಒಣ ಪ್ರದೇಶಗಳು

ರಾಜಾಸ್ಥಾನದಲ್ಲಿ ಮೇವಿಗೆ ಬರ. ಚಿಂತೆ ಇಲ್ಲ. ಮೇವು ದಾಸ್ತಾನು ಇದೆ. ಲಾರಿಗಟ್ಟಲೇ ಈಗಲೇ ಕಳುಹಿಸುತ್ತೇವೆ ಅಂದರು. ಕಳಿಸಿಯೂ ಕಳಿಸಿದರು. ಒಳ್ಳೇ ಹಸಿರು ಮೇವು. ಬರಗೆಟ್ಟಿದ್ದ ದನಗಳು ತಿಂದು ಸತ್ತೇ ಹೋದವು. ಕಾರಣ ಗೊತ್ತೇ! ಈ ಮೇವು ಕೆಡದಿರಲೆಂದು ರಾಸಾಯನಿಕ ಸಿಂಪಡಿಸಿ ಇಡಲಾಗಿತ್ತು. ದನಗಳು ತಿಂದದ್ದೇ, ಈ ರಾಸಾಯನಿಕ ಭಾರೀ ಪ್ರಮಾಣದಲ್ಲಿ ಹೊಟ್ಟೆಯೊಳಗೆ ಸೇರಿ, ತಕ್ಷಣ ಸತ್ತು ಬಿದ್ದವು.

ನಮ್ಮಲ್ಲಿ ರಿಮೋಟ್ ಸೆನ್ಸಿಂಗ್ ಏಜೆನ್ಸಿ ಎಂಬುದಿದೆ. ಉಪಗ್ರಹದ ಮೂಲಕ ಭೂ ಪ್ರದೇಶಗಳ ಚಿತ್ರ ತೆಗೆದು ವಿಶ್ಲೇಷಿಸುವ ಕೆಲಸ ಅದು ಮಾಡುತ್ತದೆ. ಆಂಧ್ರದ ಮಹಬೂಬ್ ನಗರ ಜಿಲ್ಲೆ ಒಣ ಪ್ರದೇಶ. ಅಲ್ಲಿ ಬೋರ್‌ವೆಲ್ ತೋಡಿದರೆ ನೀರು ಬರುವುದಿಲ್ಲ ಎಂದು ತಿಳಿಸಿತ್ತು. ಮಾಹಿತಿ ತಂತ್ರಜ್ಞಾನದ ಅತ್ಯಾಧುನಿಕ ಅವಸ್ಥೆಯಲ್ಲಿ ಇರುವ ಅಲ್ಲಿನ ಮುಖ್ಯಮಂತ್ರಿಗೆ, ಅವನ ಚೇಲಾಗಳಾದ ಅಧಿಕಾರಿಗಳಿಗೆ ಇದು

## ನೀರುಗಳ್ಳರು

**ಊರಿನ ಮೇಲೆ ಊರು ಬಿದ್ದರೇನು! ತಾನು ಚೆನ್ನಾಗಿ ಇದ್ದರೆ ಆಯಿತು ಎನ್ನುವ ಜನವೇ ಬಹಳ. ಹೈದರಾಬಾದ್ ಕರ್ನಾಟಕದ ಕಡೆ ಉರಿಯುವ ಬಿಸಿಲು. ನೀರಿಗೂ ಬರ. ಈ ಬರ ನೀಗಲೆಂದು ಸರ್ಕಾರ ಏನೇನೊ ಕ್ರಮ ತೆಗೆದುಕೊಳ್ಳುತ್ತದೆ. ಆದರೆ ಇದು ಮರುಭೂಮಿಯಲ್ಲಿ ಕೊಡ ನೀರು ಸುರುವಿದ ಹಾಗೆ.**

**ಇದು ಹೋಗಲಿ ಎಂದರೆ ಗಾಯದ ಮೇಲೆ ಬರೆ ಇಟ್ಟಹಾಗೆ ಸ್ಥಳೀಯ ಧುರೀಣರು ಊರಿಗೆಂದು ಕಟ್ಟಿಸಿದ ಬಾವಿ, ಅದರ ನೀರು ಎಲ್ಲ ನುಂಗಿ ನೀರು ಕುಡಿಯುತ್ತಾ ತೇಂಕಾರದಿಂದ ಮೆರೆಯುತ್ತಾರೆ.**

**ಅಂಥ ಹಲವು ಪ್ರಕರಣಗಳು ಎಲ್ಲೆಡೆ ಇವೆ. ಅದರಲ್ಲಿ ಕೆಲವನ್ನು ನಮ್ಮ ಓದುಗರಲ್ಲಿ ಒಬ್ಬರಾದ ಶರಣಪ್ಪ ವೈ. ಬುಕನಟ್ಟಿ ಪತ್ರ ಬರೆದು ತಿಳಿಸಿದ್ದಾರೆ. ಪತ್ರದ ಮುಖ್ಯ ಅಂಶಗಳನ್ನು ಇಲ್ಲಿ ದಾಖಲಿಸಲಾಗಿದೆ.**

### ಒಂದು ಪತ್ರ

ಮಾನ್ಯರೇ,

ನನ್ನ ಊರು ಯಲಬುರ್ತಿ, ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿಗೆ ಸೇರಿದ ಗ್ರಾಮ. ಊರಿಂದ ಎಂಟು ಕಿ.ಮೀ ದೂರದ ಹಿರೇಬನ್ನಿಗೋಳ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಇದು ಬರುತ್ತದೆ.

ಎಲ್ಲೆಡೆ ಜನ ಹಣ, ಒಡವೆ ದೋಚುವ ಡಕಾಯಿತರು, ದರೋಡೆಕೋರರನ್ನು ನೋಡಿರಬಹುದು. ಆದರೆ ನಮ್ಮೂರಲ್ಲಿ ನೆಲ, ನೀರುಗಳನ್ನೇ ದೋಚುವ ಭಾರಿ ಕಳ್ಳರಿದ್ದಾರೆ.

ಇಂಥ ಹಲವು ಧುರೀಣರ ಕಿರು ಪರಿಚಯ ಇಲ್ಲಿದೆ. ಊರಿಗಾಗಿ ಸರ್ಕಾರಿ ಜಮೀನಿನಲ್ಲಿ ಬೋರ್‌ವೆಲ್ ಒಂದನ್ನು ತೋಡಿಸಲಾಯಿತು. ಅದಕ್ಕೆ ಕೈಪಂಪು ಅಳವಡಿಸಿ ಜನರಿಗೆ ನೀರು ದೊರೆಯುವಂತೆ ಮಾಡುವ ಬದಲು ನಮ್ಮೂರಿನ ಗ್ರಾಮ ಪಂಚಾಯತ್ ಸದಸ್ಯನೊಬ್ಬ, ಬೋರ್‌ವೆಲ್‌ಗೆ ಸಬ್‌ಮರ್ಸಿಬಲ್ ಪಂಪ್‌ಸೆಟ್ ಅಳವಡಿಸಿ, ಅಲ್ಲಿಂದ ನೂರು ಅಡಿ ದೂರದಲ್ಲಿದ್ದ ತನ್ನ ಜಮೀನಿಗೆ ಪೈಪುಗಳ ಮೂಲಕ ನೀರು ಕೊಂಡೊಯ್ದು ತನ್ನ ಜಮೀನಿಗೆ ನೀರು ಉಣಿಸಿದ ಮೇಲೆ ಉಳಿದ ನೀರನ್ನು ಪಕ್ಕದ ಜಮೀನಿನವರಿಗೂ ಮಾರತೊಡಗಿದ್ದಾನೆ. ಯಾರದೋ ದುಡ್ಡು ಎಲ್ಲವ್ವನ ಜಾತ್ರೆ ಎಂದು ಇದಕ್ಕಲ್ಲವೇ ಹೇಳುವುದು. ಊರಿಗೆ ಕುಡಿಯುವ ನೀರು ಒದಗಿಸಲು ತೋಡಲಾದ ಬಾವಿ, ನೆಲ ಎಲ್ಲ ರಾಜಾರೋಷವಾಗಿ ಅಪಹರಿಸಿ ಆರಾಮಾಗಿರುವ ಈತ ಪಿಎಲ್‌ಡಿ ಬ್ಯಾಂಕ್‌ನ ಮಾಜಿ ಅಧ್ಯಕ್ಷ ಕೂಡ.

ಇನ್ನೊಬ್ಬ ಧುರೀಣನ ಕತೆ ಕೇಳಿ. ಈತ ಸ್ಥಳೀಯ ಮುಖಂಡ. ಜಮೀನನ್ನು ಒತ್ತುವರಿ ಮಾಡಿಕೊಂಡು ಸಾರ್ವಜನಿಕರ ಜಮೀನನ್ನೇ ತನ್ನದೆಂದು ಲಪಟಾಯಿಸಿದ ಈ ಭೂಪ ಅಲ್ಲಿ ಬೋರ್‌ವೆಲ್ ತೋಡಿಸಿ ಆರಾಮಾಗಿ ತನ್ನ ಜಮೀನಿಗೆ ನೀರು ಒದಗಿಸಿಕೊಂಡ. ಹೇಳುವವರು ಕೇಳುವವರು ಕೂಡ ಇಲ್ಲಿ ಯಾರಿಲ್ಲ.

ಧುರೀಣರೇ ಹೀಗಾದ ಮೇಲೆ ಅವರ ಕೈಕೆಳಗೆ ಕೆಲಸ ಮಾಡುವವರು ಸುಮ್ಮನೆ ಇರುತ್ತಾರೆಯೇ? ನಮ್ಮ ಪಂಚಾಯತ್‌ನ ಉದ್ಯೋಗಿಯೊಬ್ಬ ಸರ್ಕಾರಿ ಜಾಗೆಯನ್ನು ಯಾರಿಗೋ ಮಾರಿ, ಬಂದ ಹಣವನ್ನು ತನ್ನ ಜೇಬಿಗಿಟ್ಟುಕೊಂಡು ನೆಮ್ಮದಿಯಿಂದ ಕುಳಿತಿದ್ದಾನೆ. ಇನ್ನು ಜನ ಉದ್ಧಾರವಾಗುವುದು ಸಾಧ್ಯವೇ? ನೀವೇ ಹೇಳಿ.

ಈ ಪತ್ರ ಓದಿದ ನಂತರವಾದರೂ ಧುರೀಣರು ಎನಿಸಿಕೊಂಡ ಜನ ಎಚ್ಚೆತ್ತು ಜನರ ಭೂಮಿ, ನೀರನ್ನು ಅವರಿಗೇ ಬಿಟ್ಟುಕೊಟ್ಟರೆ ಸರಿ, ಇಲ್ಲವಾದಲ್ಲಿ ಸ್ಥಳೀಯರನ್ನು ಸಂಘಟಿಸಿ ನ್ಯಾಯ ಪಡೆಯಲು ಹೋರಾಡುವುದು ಅನಿವಾರ್ಯ ಆಗುತ್ತದೆ.

ಇಂತು

**ಶರಣಪ್ಪ ವೈ. ಬುಕನಟ್ಟಿ, ಯಲಬುರ್ತಿ**

---

ತಿಳಿದಿರಲೇ ಇಲ್ಲ. ಮಹಬೂಬ್ ನಗರದಲ್ಲಿ ಕಂಡ ಕಂಡಲ್ಲಿ ಬಾವಿ ತೋಡಿದರು. ಅದಕ್ಕೆ ಬ್ಯಾಂಕುಗಳು ಸಾಲ ಕೊಟ್ಟವು. ನೀರು ಮಾತ್ರ ಬರಲಿಲ್ಲ. ಸಾಲ, ಸಾಲದ ಬಡ್ಡಿ ಎಲ್ಲ ನೆತ್ತಿ ಏರಿ ಕುಳಿತುಕೊಂಡಿದೆ. ಅಲ್ಲಿನ ಬಡ ರೈತರ ಜೀವ ತಿನ್ನುತ್ತಾ ಇದೆ.

ಕಳೆದ ಮಳೆಗಾಲಕ್ಕೆ ರಾಜಾಸ್ಥಾನದಲ್ಲಿ ಪ್ರವಾಹ. ಇಟ್ಟ ಬೆಳೆ ಕೊಚ್ಚಿ ಹೋಯಿತು. ಮೇಲ್ಮಣ್ಣು ಕೂಡ ಅದರೊಂದಿಗೇ ಹೋಯಿತು. ಇನ್ನು ಅಲ್ಲಿ ಬೆಳೆ ತೆಗೆಯುವುದು ಅಸಾಧ್ಯ ಎಂಬಂಥ ಪರಿಸ್ಥಿತಿ. ಅಲ್ಲಿನ ಜನ ಜಮೀನು ಅಡವಿಟ್ಟು ಸಾಲ ತೆಗೆದರು. ಅದಕ್ಕೆ ಶೇಕಡಾ 24 ರಷ್ಟು ಬಡ್ಡಿ. ಜಗತ್ತಿನ ಎಲ್ಲೂ ಇಲ್ಲದಷ್ಟು ಈ ಬಡ್ಡಿಯನ್ನು ಅವರೆಲ್ಲ ಜನ್ಮವಿಡೀ ದುಡಿದರೂ ತೀರಿಸಲು ಸಾಧ್ಯವಿಲ್ಲ. ಅದು ಅವರಿಗೂ ಗೊತ್ತು. ಹಾಗಾಗಿ ವಲಸೆ ಆರಂಭವಾಯಿತು. ನವೆಂಬರ್ ವೇಳೆಗೇ ಆರಂಭವಾದ ಈ ವಲಸೆ ಬಗ್ಗೆ ಸರ್ಕಾರ ಕಣ್ಮುಚ್ಚಿಕೊಂಡು ಕುಳಿತಿತ್ತು. ಈಗ ಎಲ್ಲ ಕೈ ಮೀರಿ ಹೋದ ಮೇಲೆ ಬೊಬ್ಬೆ ಹಾಕುತ್ತಿದೆ. ಗುಜರಾತ್ ಸರ್ಕಾರ ಅದನ್ನೂ ಮಾಡಲಿಲ್ಲ.



ಸತ್ತ ಜಾನುವಾರು

ಅದು ತೀರಾ ತಲೆಕೆಡಿಸಿಕೊಂಡಿದ್ದು ಯಾವುದಕ್ಕೆ ಗೊತ್ತೇ? ಅಲ್ಲಿನ ಡೊಳ್ಳು ಹೊಟ್ಟೆ ರಾಜಕಾರಣಿಗಳು ತಿರುಗಾಡಲು ವಿಶೇಷ ವಿಮಾನ ಬೇಕಂತೆ. ಅದರ ಬೆಲೆ ಹದಿನೈದು ಕೋಟಿ. ಆ ವಿಮಾನ ನೋಡಿ, ಒಪ್ಪಿಗೆ ಕೊಟ್ಟು ಬರಲು ತಂಡ ಒಂದನ್ನು ವಿದೇಶಕ್ಕೆ ರವಾನಿಸಿದೆ ಅಲ್ಲಿನ ಸರ್ಕಾರ. ರೋಮ್ ಹೊತ್ತಿ ಉರಿಯುತ್ತಿದ್ದಾಗ ನೀರೋ ದೊರೆ ಪಿಟೀಲು ಬಾರಿಸಿಕೊಂಡು ಆನಂದವಾಗಿ ಇದ್ದನಂತೆ. ಅಷ್ಟು ದೂರದ ಇತಿಹಾಸಕ್ಕೆ ಯಾಕೆ ಹೋಗಬೇಕು? ಕಣ್ಣೆದುರೇ ಅಂಥ ಎಷ್ಟೆಲ್ಲ ನೀರೋಗಳು ದಿನ ನಿತ್ಯ ಕಾಣುತ್ತಾರೆ ಅಲ್ಲವೇ?

ನಮ್ಮ ಅಧಿಕಾರಿಗಳ ಹುಚ್ಚು ದರ್ಬಾರಿಗೆ ಇಲ್ಲೊಂದು ನಿದರ್ಶನ ಇದೆ. ಬರ ಎಂದು ಹಾಹಾಕಾರ ಆರಂಭವಾದಾಗ, ಇವರು ಮಾಡಿದ ಮೊದಲ ಕೆಲಸ ಎಂದರೆ ರಿಗ್ ಯಂತ್ರಗಳನ್ನು ರವಾನಿಸಿ,



ನೀರಿಲ್ಲದ ಬಾವಿಗೆ ಮುಗಿಬಿದ್ದ ನೂರಾರು ಜನ

ಬೋರ್‌ವೆಲ್ ಕೊರೆಯಲು ಆರಂಭಿಸಿದ್ದು. ರಾಜಾಸ್ಥಾನ ಮರಳುಗಾಡು. ಅಲ್ಲಿ ಸಾವಿರಾರು ವರ್ಷಗಳಿಂದ ಜನ ತಮ್ಮದೇ ನೀರಿನ ವ್ಯವಸ್ಥೆ ಮಾಡಿಕೊಂಡಿದ್ದರು. ಬಾವಡಿ, ಹೌರಾ, ಮೆಟ್ಟಲ ಬಾವಿ ಹೀಗೆ. ಈ ಅಧಿಕಾರಿಗಳ ದಂಡು ರಿಗ್ ಹಾಕಿ ಪವಾಡ ಮಾಡುತ್ತೇವೆ ಎಂದು ಕಂಡಾಬಟ್ಟೆ ಬೋರ್‌ವೆಲ್ ಕೊರೆದರು. ಅಂತರ್ಜಲ ಬತ್ತಿತ್ತು. ಸಾಂಪ್ರದಾಯಿಕ ನೀರಿನ ಸೆಲೆಗಳು ಬತ್ತಿದವು. ಅಂತರ್ಜಲ ಇಲ್ಲವಾದ್ದರಿಂದ ಬೋರ್‌ವೆಲ್‌ಗಳಲ್ಲೂ ನೀರಿಲ್ಲ. ಇವರು ಮತ್ತೂ ಬಾವಿ ಕೊರೆದರೆ ಆಗುವುದು ಒಂದೇ. ರಾಜಾಸ್ಥಾನಕ್ಕೆ ಶಾಶ್ವತ ಕುಡಿಯುವ ನೀರಿನ ಬರ ಕಾಣಿಸಿಕೊಳ್ಳಲಿದೆ. ಇದೇ ರೀತಿ ಇವರು ಬಾವಿಗಳನ್ನು ಕೊರೆಯುತ್ತಾ ಹೋದರೆ, ದೆಹಲಿಯಲ್ಲಿ ಇನ್ನು ಹದಿನೈದು ವರ್ಷದಲ್ಲಿ ಕುಡಿಯಲು ನೀರು ಸಿಗುವುದಿಲ್ಲ ಎಂದು ತಜ್ಞರೇ ಇವತ್ತು ಹೇಳುತ್ತಾ ಇದ್ದಾರೆ.

**ಮೂಕ ಜೀವಗಳ ಗೋಳು :**

ಕೇಂದ್ರ ಸರ್ಕಾರ 'ಬರವೇ ಇಲ್ಲ' ಎಂದು ಬೊಬ್ಬೆ ಹಾಕುತ್ತಾ ಇದ್ದಾಗ ಟಿವಿ ಮಾಧ್ಯಮಗಳು ರಾಜಾಸ್ಥಾನದಲ್ಲಿ ಸತ್ತು ಬಿದ್ದ ದನ, ಎಮ್ಮೆಗಳ ಚಿತ್ರ ಬಿತ್ತರಿಸುತ್ತಾ ಇದ್ದವು. ಬರದ ಸುಳಿವು ಸಿಕ್ಕಿ ಕೆಲವರು ರಾಜಾಸ್ಥಾನದ ಬರಡು ನೆಲ ಬಿಟ್ಟು ಹತ್ತಿರದ ಹಸಿರಿನ ಪಂಜಾಬಿಗೆ ತಮ್ಮ ದನ ಕರುಗಳೊಡನೆ ವಲಸೆ ಹೋದರು. ಆದರೂ ಈ ಬರ ಮುಗಿದು, ಮುಂಗಾರಿನ ಮಳೆ ತಂಪೆರೆಯುವ ಹೊತ್ತಿಗೆ ಕನಿಷ್ಠ ಒಂದು ಕೋಟಿ ಜಾನುವಾರ ಜೀವ ಬಿಟ್ಟಿರುತ್ತದೆ. ಕನಿಷ್ಠ ಒಂದು ಲಕ್ಷ ಜನ ಸಾವಿನ ಅಂಚಿನಲ್ಲಿ ನಿಂತಿರುತ್ತಾರೆ. ಇವರಿಗೆ ಬಾಯಾದರೂ ಇದೆ. ಆದರೆ ಮೂಕ ಪ್ರಾಣಿಗಳು ಏನು ಮಾಡಬೇಕು?

**ಹಾನಿಗೀಡಾದ ಪ್ರದೇಶಗಳು**

| ರಾಜ್ಯ | ಹಾನಿಗೀಡಾದ ಜಿಲ್ಲೆಗಳ ಸಂಖ್ಯೆ |
|---|---|
| ಆಂಧ್ರ ಪ್ರದೇಶ | 18 |
| ಗುಜರಾತ್ | 17 |
| ಹಿಮಾಚಲ ಪ್ರದೇಶ | 12 |
| ಜಮ್ಮು ಮತ್ತು ಕಾಶ್ಮೀರ | 6 |
| ಕರ್ನಾಟಕ | 21 |
| ಮಧ್ಯಪ್ರದೇಶ | 7 |
| ಮಣಿಪುರ | 5 |
| ಮಿಜೋರಂ | 3 |
| ರಾಜಾಸ್ಥಾನ | 26 |
| ತ್ರಿಪುರ | 4 |
| ಪಶ್ಚಿಮ ಬಂಗಾಳ | 10 |

ನೀರು, ನೀರು...

ಒಂದು ಹನಿ ನೀರಿಗೂ ಪರದಾಡಬೇಕಾದ ಸ್ಥಿತಿ ಕನಿಷ್ಠ ಮೂರು ರಾಜ್ಯಗಳಲ್ಲಿ ಇದೆ. ಗುಜರಾತ್‌ನ ಸೌರಾಷ್ಟ್ರದಲ್ಲಿ ಮನೆಗೆ ಬೇಕಾದ ನೀರು ಒದಗಿಸುವುದು ಹೆಂಗಸರ ಕರ್ತವ್ಯ. ಅಲ್ಲಿನ ಆಳದ ಬಾವಿಗಳಲ್ಲಿ ಹೆಂಗಸರೇ ಹಗ್ಗ ಹಿಡಿದುಕೊಂಡು ಇಳಿಯಬೇಕು. ಸಣ್ಣಗೆ ಜಿನುಗುವ ನೀರು ಕೊಂಚ ಸಂಗ್ರಹ ಆಗುತ್ತಿದ್ದ ಹಾಗೆ ಅದನ್ನು ಕೊಡಕ್ಕೆ ಮೊಗೆದುಕೊಳ್ಳಬೇಕು ಹಾಗೆ ಸಂಗ್ರಹಿಸಿ ಕೊಡ ತುಂಬಿದ ಮೇಲೆ ಮೇಲಕ್ಕೆ ಸಾಗಿಸಿ, ಮನೆಗೊಯ್ಯಬೇಕು. ಹೀಗೆ ಆಳದ ಬಾವಿಯೊಳಗೆ ಹಗ್ಗ ಹಿಡಿದುಕೊಂಡು ಇಳಿಯುವಾಗ, ಎಷ್ಟೋ ಜನ ಹಿಡಿತ ತಪ್ಪಿ ಬಿದ್ದು ಸತ್ತೇ ಹೋಗಿದ್ದಾರೆ. ಆದರೂ ಇದು ಅಲ್ಲಿನ ಹೆಂಗಸರಿಗೆ ಇದು ತಪ್ಪದ ಕರ್ಮ.

ಸುರೇಂದ್ರನಗರ ಜಿಲ್ಲೆಯ ರಾಜಾಪಾರ್ ಹಳ್ಳಿಯಲ್ಲಿ ನೂರು ಕುಟುಂಬಗಳಿವೆ. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಇಲ್ಲಿನ ಅಂತರ್ಜಲ ಪ್ರಮಾಣ ಹತ್ತು ಪಟ್ಟು ಕುಸಿದಿದೆ. ಕೆರೆ ಬಯಲಲ್ಲಿ ಮಣ್ಣು ತೋಡಿದರೆ ಒಂದಷ್ಟು ನೀರು ಶೇಖರವಾಗುತ್ತದೆ. ಅದನ್ನು ಲೋಟದಲ್ಲಿ ಎತ್ತಿಕೊಂಡು ಕೊಡಕ್ಕೆ ಹಾಕಬೇಕು. ನೀರಿನ ಸೆಲೆ ಇದೆ ಎಂದು ಆಳವಾಗಿ ತೋಡಿದರೆ ಉಪ್ಪುಪ್ಪು ಹೊಂಡು ನೀರು. ಹಳ್ಳಿಗೆ ರಸ್ತೆಯೂ ಇಲ್ಲ. ಟ್ಯಾಂಕರಿನಿಂದ ನೀರು ಒದಗಿಸುವ ಪ್ರಶ್ನೆಯೇ ಇಲ್ಲ. ಊರಿಂದ ಆರು ಮೈಲಿ ದೂರದಲ್ಲೊಂದು ಬೋರ್‌ವೆಲ್ ಇದೆ. ದಿನಾ ಅಲ್ಲಿಗೆ ಹೋಗಿ ಕೈ ಪಂಪು ಒತ್ತಿ ನೀರು ತುಂಬಿಕೊಂಡು ಬರಬೇಕು. ಅದೂ ಬತ್ತುತ್ತಾ ಇದೆ. ಯಾವಾಗ ಒಣಗಿ ನಿಲ್ಲುತ್ತದೋ ತಿಳಿಯದು. ಇಡೀ ಗುಜರಾತ್‌ನ ಸುಮಾರು

## ತೀವ್ರ ಹಾನಿಗೀಡಾದ ಪ್ರದೇಶಗಳು

| ರಾಜ್ಯ | ಮಳೆ ಕೊರತೆ | ಹಾನಿಗೀಡಾದ ಹಳ್ಳಿಗಳ ಸಂಖ್ಯೆ | ಜನ | ಜಾನುವಾರು |
|---|---|---|---|---|
| ಗುಜರಾತ್ | ಶೇ.38 | 8421 | 250 ಲಕ್ಷ | 71.33 ಲಕ್ಷ |
| ರಾಜಾಸ್ಥಾನ | ಶೇ.24 | 23406 | 262 ಲಕ್ಷ | 345.6 ಲಕ್ಷ |
| ಆಂಧ್ರ ಪ್ರದೇಶ | ಅತೃಪ್ತಿಕರ | 17431 | - | - |
| ಮಧ್ಯಪ್ರದೇಶ | ಚದುರಿದಂತೆ | 3240 | 26.64 ಲಕ್ಷ | 34.28 ಲಕ್ಷ |



ಬತ್ತಿ ಬೆಂಗಾಡಾಗಿರುವ ರಾಜಾ ಸಮಂಡ್ ಸರೋವರ

ಎರಡು ಸಾವಿರ ಹಳ್ಳಿಗಳಿಗೆ ಟ್ಯಾಂಕರುಗಳಲ್ಲಿ ನೀರು ಒದಗಿಸಲೇಬೇಕು. ಅದಕ್ಕಾಗಿ ಕೆಲವು ಟ್ಯೂಬ್ ವೆಲ್‌ಗಳನ್ನು ಸರ್ಕಾರ ಗುರುತಿಸಿ ಇಟ್ಟಿದೆ. ಆದರೆ ಇಂಥ ತೀವ್ರ ಕಾರ್ಯಾಚರಣೆ ಏನಿದ್ದರೂ ಬೇಸಿಗೆಯ ಝಳ ಮುಗಿಲು ಮುಟ್ಟುವ ಮೇ ತಿಂಗಳ ಅಂತ್ಯಕ್ಕೆ. ಅದಕ್ಕೆ 922 ಕೋಟಿ ರೂಪಾಯಿ ಬೇಕಿದೆ.

ಆದರೆ ಅಲ್ಲಿಯವರೆಗೆ ಜನ ಬದುಕಿ ಉಳಿಯುತ್ತಾರೆಯೇ?

ಅಲ್ಲೀಗ ಎರಡುಕೋಟಿ ಜನಕ್ಕೆ ನಿತ್ಯ ನೀರಿನದೇ ಸಮಸ್ಯೆ. ಜೊತೆಗೆ ತಮ್ಮನ್ನು ನೆಚ್ಚಿದ ಜಾನುವಾರುಗಳಿಗೆ ಮೇವು ಬೇಕಿದೆ.

ಸುರೇಂದ್ರ ನಗರ ಜಿಲ್ಲೆಯ ಸಾಯ್ಲಾ ಎಂಬಲ್ಲಿ ಮಹಾವೀರ ಜೈನ್ ಟ್ರಸ್ಟ್ ದನಗಳಿಗೆಂದೇ ದೊಡ್ಡಿ ಮಾಡಿದೆ. ದನಗಳಿಗೆಂದು ತೊಟ್ಟಿಗಳಲ್ಲಿ ನೀರು ತುಂಬಿಸಿಟ್ಟರೆ ನಸುಕಿನಲ್ಲೇ ನೀರನ್ನು ಜನ ಕದ್ದೊಯ್ದು ಬಿಡುತ್ತಾರೆ. ದನಕ್ಕೆ ಇಟ್ಟ ನೀರಾದರೇನಂತೆ?

ಇದು ಸಾಲದೆಂಬಂತೆ ಕಳೆದ ಏಪ್ರಿಲ್ 23 ರಂದು ಒಂದೇ ದಿನ 115 ದನ ಸತ್ತವು. ಭಾರೀ ಬಿಸಿಲಿನಿಂದಾಗಿ ಹಸಿರು ಮೇವಲ್ಲಿ ವಿಷಾನಿಲ ಉತ್ಪತ್ತಿ ಆಗಿದ್ದು ಇದಕ್ಕೆ ಕಾರಣ ಎನ್ನುತ್ತಾರೆ ತಜ್ಞರು. ಅದಕ್ಕೆ ಬದಲಾಗಿ ಒಣ ಮೇವು ಕೊಡಿ ಎನ್ನುತ್ತಾರೆ. ಆದರೆ ಒಣ ಮೇವು ಎಲ್ಲಿದೆ?

### ಕೆಟ್ಟ ಮೇಲೆ ಬುದ್ಧಿ ಬಂತು

ನಮ್ಮಲ್ಲಿ ನೈಸರ್ಗಿಕ ವಿಕೋಪ ಪರಿಹಾರ ನಿಧಿ ಎಂಬುದೊಂದಿದೆ. ಎಲ್ಲಿ ಏನೇ ಆದರೂ ಅದಕ್ಕೆ ಪರಿಹಾರ ಒದಗಿಸಲು ಈ ಹಣ ಒದಗಿಸಲಾಗುತ್ತದೆ.

ಅಂಥ ವಿಕೋಪ ತಲೆದೋರದಂತೆ ತಡೆಯುವ ಯಾವ ಕ್ರಮವೂ ನಮ್ಮಲ್ಲಿ ಇಲ್ಲ. ಭೂಕಂಪ, ಚಂಡಮಾರುತ, ಬರ ಯಾವಾಗ ಬರುತ್ತವೆ ಎಂದು ಇವತ್ತು ಕರಾರುವಕ್ಕಾಗಿ ತಿಳಿಯಬಹುದು. ಆದರೆ ನಮ್ಮವರು, ಅದು ಬಂದಾಗ ನೋಡಿಕೊಳ್ಳೋಣ ಎಂಬ ಧೋರಣೆ ಅನುಸರಿಸುತ್ತಾರೇ ಹೊರತು, ಬರದಂತೆ ತಡೆಯೋಣ ಎಂದು ಯೋಚಿಸುವುದಿಲ್ಲ.



ಬೊಗಸೆ ನೀರಿಗೂ ಪರದಾಟ

ಒರಿಸ್ಸಾ ಚಂಡಮಾರುತದ ಮುನ್ಸೂಚನೆ ಇದ್ದರೂ ಹಾನಿಗೀಡಾಗುವ ಪ್ರದೇಶಗಳಿಂದ ಜನರನ್ನು ತೆರವು ಮಾಡುವ ಯೋಚನೆಯನ್ನೇ ಅಲ್ಲಿನ ಸರ್ಕಾರ ಮಾಡಲಿಲ್ಲ. ಹೀಗಾಗಿ ಸಾವಿರಾರು ಜನ ಸಮುದ್ರದಿಂದ ಉಕ್ಕಿ ಬಂದ ಅಲೆಗಳಲ್ಲಿ ಜಲ ಸಮಾಧಿಯಾದರು.

ಮತ್ತೆ ಇನ್ನೊಂದು ಇಂಥ ವಿಕೋಪ ತಲೆದೋರುವವರೆಗೆ ನಮ್ಮ ಸರ್ಕಾರ, ಜನ ಈ ಕುರಿತು ಯೋಚಿಸಲು ಹೋಗುವುದೇ ಇಲ್ಲ. ಒಂದು ಪ್ರದೇಶದ ಅಭಿವೃದ್ಧಿ ಕಾರ್ಯ ಕೈಗೆತ್ತಿಕೊಳ್ಳುವಾಗ, ಅಲ್ಲಿ ತಲೆದೋರಬಹುದಾದ ನೈಸರ್ಗಿಕ ವಿಪತ್ತು ಪರಿಗಣಿಸಿ ಯೋಜನೆ ರೂಪಿಸುವುದೇ ಇಲ್ಲ. ಇದರ ಜೊತೆಗೇ ಅಲ್ಲಿನ ಜನರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಅವರಿಂದಲೇ ವಿಪತ್ತು ತಲೆದೋರದಂತೆ ಯೋಜನೆಗಳನ್ನು ಅಳವಡಿಸಬೇಕು. ಇದನ್ನು ಯಾವ ಸರ್ಕಾರಗಳೂ ಮಾಡುವುದಿಲ್ಲ. ಇದರಿಂದಾಗಿಯೇ ರಾಜಾಸ್ಥಾನದಲ್ಲಿ ನೀರೊದಗಿಸಲು ರಿಗ್ ಬೋರ್‌ಗಳನ್ನು ಕೊರೆದು, ಇರುವ ಅಲ್ಪ ಸ್ವಲ್ಪ ಅಂತರ್ಜಲ ಬತ್ತಿಸಿ, ಎಲ್ಲ ಹಾಳುಗೆಡುವುತ್ತಾರೆ.



ಬತ್ತಿದ ಬೋರ್‌ವೆಲ್ ಒಣಗುತ್ತಿರುವ ಪೈರು

ವಿಪತ್ತು ತಲೆದೋರಿದಾಗ ಜನರ ನೆರವಿಗೆ ಬರಬೇಕಾದ್ದು ಸರ್ಕಾರದ ಕರ್ತವ್ಯ. ಆದರೆ ತಾನೇನೋ ಮಹಾ ದಾನ ಮಾಡುತ್ತ ಇರುವಂತೆ ಸರ್ಕಾರಗಳು ವರ್ತಿಸುತ್ತವೆ. ಇದರಲ್ಲಿ ರಾಜಕೀಯವೂ ಬೆರೆತಿರುತ್ತದೆ. ಬರ ಬರುತ್ತಿದೆ ಎಂದು ರಾಜಾಸ್ಥಾನ ಸರ್ಕಾರ ಮೂರು ತಿಂಗಳ ಹಿಂದೆ ಬೊಬ್ಬೆ ಇಟ್ಟರೂ, ದೆಹಲಿಯಲ್ಲಿ ಫೈಲುಗಳು ಚಲಿಸಲೇ ಇಲ್ಲ. ಅದೇ ಬರ ಗುಜರಾತ್‌ನಲ್ಲಿ, ಆಂಧ್ರದಲ್ಲಿ ತಾಂಡವ ಆರಂಭಿಸಿದಾಗ ಕೇಂದ್ರ ಸರ್ಕಾರ ಚುರುಕಾಗಿ ಕೆಲಸ ಮಾಡಲಾರಂಭಿಸಿತು. ವಿಚಿತ್ರವೆಂದರೆ ಗುಜರಾತ್ ಸರ್ಕಾರಕ್ಕೆ ಬರದ ಕಲ್ಪನೆಯೇ ಇರಲಿಲ್ಲ. ಅದು ಕೇಂದ್ರದ ನೆರವು ಕೋರುವ ಗೋಜಿಗೂ ಹೋಗಿರಲಿಲ್ಲ. ಆದರೆ ಪರಿಹಾರದ ಭರಾಟೆ ಗಮನಿಸಿದರೆ, ಬೇರೆಲ್ಲ ರಾಜ್ಯಗಳಿಗಿಂತ ಕೇಂದ್ರ ಸರ್ಕಾರ ಗುಜರಾತ್ ಬಗ್ಗೆ ಹೆಚ್ಚು ನಿಗಾ ವಹಿಸಿದ್ದು ಕಾಣುತ್ತದೆ.

**ತಲುಪದ ಪರಿಹಾರ**

ಈ ಮುಂದೆ ಹೇಳಿದ ಹಾಗೆ ಸರ್ಕಾರ ಕೈಯಿಟ್ಟ ಕೆಲಸವೆಲ್ಲ ಹಾಳು. ಅದಕ್ಕೆ ಉದಾಹರಣೆಯಾಗಿ ಒರಿಸ್ಸಾ ಚಂಡಮಾರುತ ಸಂತ್ರಸ್ತರಿಗೆ ಎಂದು ಆರ್ಡರ್ ಮಾಡಿದ್ದ ಕಂಬಳಿಗಳು ಈ ಉರಿಯುವ, ನೀರಿಲ್ಲದ ಬೇಸಿಗೆಯಲ್ಲಿ ಬಂದಿವೆ. ಇಂಥದ್ದೇ ಕತೆ ಈಗ ಆಂಧ್ರದಲ್ಲಿ. ಅಲ್ಲಿ ಹೊಟ್ಟೆಗಿಲ್ಲದೆ ಜನ ಪರದಾಡುತ್ತಾ ಇದ್ದಾರೆ. ಯಾರಾದರೂ ಕೂಲಿ ಕೊಟ್ಟರೆ ಕೆಲಸ ಮಾಡಲು ಅವರು ಸಿದ್ಧ. ಈಗಾಗಲೇ 40 ಕೋಟಿ 'ಕೂಲಿಗಾಗಿ ಕಾಳು' ಯೋಜನೆಯಲ್ಲಿ ಬಿಡುಗಡೆ ಮಾಡಲಾಗಿದೆ ಎಂದು ಚಂದ್ರಬಾಬು ನಾಯ್ಡು ಏಪ್ರಿಲ್ ಮೊದಲ ವಾರದಲ್ಲೇ ಹೇಳಿದರು.

ಮೇ ತಿಂಗಳು ಕಳೆಯುತ್ತಾ ಬಂದರೂ ಬರದಿಂದ ತತ್ತರಿಸಿರುವ ಮೆಹಬೂಬ್‌ನಗರ ಜಿಲ್ಲೆಯ ಹಳ್ಳಿಗಳಿಗೆ ಹಣವೇ ಹೋಗಿಲ್ಲ. ಅದು ಯಾವಾಗ ತಲುಪುತ್ತದೋ! ದೇವರೇ ಬಲ್ಲ.

**ಅಡಕೊತ್ತಿಗೆ ಸಿಕ್ಕಿದ ಜನ**

ಮೇಲೆ ರಾಚುವ ಬಿಸಿಲು. ಇತ್ತ ಸರ್ಕಾರದ ನಿರ್ಲಕ್ಷ್ಯ. ರಾಜಾಸ್ಥಾನದ ಹೈವೇ ಮಗ್ಗುಲುಗಳಲ್ಲಿ ಕೂಲಿ ಮಾಡುವ ಜನ, ಹೋಗಿ ಬರುವ ಕಾರುಗಳಿಗೆ ಕೈ ತೋರಿಸಿ ನಿಲ್ಲಿಸುತ್ತಾರೆ. ಯಾರಾದರೂ ಕರುಣೆ ತೋರಿ ಕಾರು ನಿಲ್ಲಿಸಿದರೆ 'ಸ್ವಲ್ಪ ನೀರಿದ್ದರೆ ಕೊಡಿ' ಎಂದು ಬೇಡಿಕೊಳ್ಳುತ್ತಾರೆ. ಪುಣ್ಯಾತ್ಮರು ಹೃದಯ ಕರಗಿ ಒಂದು ಬಾಟಲು ನೀರು ದಾನ ಮಾಡಿದರೆ, ಅದನ್ನು ಜತನವಾಗಿ ಬಳಸಿ ಎರಡು ದಿನ ದೂಡುತ್ತಾರೆ. ದೆಹಲಿಯ ಅಧಿಕಾರಿಗಳು ರಾಜ್ಯದ ರಾಜಧಾನಿಗಳಲ್ಲಿ ಇರುವ ಅಧಿಕಾರಿಗಳತ್ತ ಬೆರಳು ತೋರಿಸುತ್ತಾರೆ. ಇವರು ಅವರತ್ತ.... ಒಟ್ಟಾರೆ ಈ ದೇಶದಲ್ಲಿ ಹುಟ್ಟುವುದು, ಅದರಲ್ಲೂ ಬಡವನಾಗಿ ಹುಟ್ಟುವುದೇ ಮಹಾ ಪಾಪ ಎನಿಸುವಂತೆ ಮಾಡುವುದರಲ್ಲಿ ಈ ಅಧಿಕಾರಿಗಳ ಹಿಂಡು ಸಫಲವಾಗಿದೆ.

■ ವಿವಿಧ ಮೂಲಗಳಿಂದ

# ಮುಗಿಯದ ಯಾತ್ರೆ



ಕತೆ

ಮಲಯಾಳಂ : ಬಾಲಕೃಷ್ಣ ಮಾಂಗ್ಯಾಡ್
ಕನ್ನಡದಲ್ಲಿ : ಕೋವರ್‌ಕೊಲ್ಲಿ ಕರುಣಾಕರ

**ಊರ ಹಳೆಯ ದೇವಾಲಯದ ಮೇಲ್ಭಾಗದಲ್ಲಿದ್ದ ಅಕ್ಕನ ಮನೆಯ ಕಡೆಗಿರುವ ಹಾದಿಯಲ್ಲಿ ಅಡಿ ಇಟ್ಟ, ಬಿದಿರಿನ ಮುಳ್ಳು ಕಡ್ಡಿಗಳಿಂದ ನಿರ್ಮಿಸಿದ ಬೇಲಿ, ಅದಕ್ಕೆ ಕಿರಿದಾದ ಒಂದು ಗೇಟು. ಮುಂದೆ ಅಡಿ ಇಟ್ಟಾಗ ಸಿಕ್ಕುವ ಕಪ್ಪು ಅಂಗಳ, ಬೇಸಗೆಯಲ್ಲಿ ಸಗಣಿ ಮಸಿ ತಿಕ್ಕಿ ಉಜ್ಜಿದ ನಯವೆಲ್ಲಾ ಮಳೆಯಲ್ಲಿ ಕರಗಿ ತೊನ್ನು ಹಿಡಿದವನ ಬೆನ್ನಿನಂತಿತ್ತು.**

ಆತ ಊರ ಹಾದಿ ಹಿಡಿದಾಗ ಅವನೊಡನೆ ನಿಶೆಯು ಹಿಂಬಾಲಿಸಿತು. ಮೋಡ ಕವಿದ ಆಗಸದಿಂದ ದೊಡ್ಡ ದೊಡ್ಡ ಹನಿಗಳು ಉದುರತೊಡಗಿದವು. ಮೊದಲು ಬೀಳುವ ಮಳೆಯಾದುದರಿಂದ ಹೊಸ ಮಣ್ಣಿನ ವಾಸನೆ ಬರುತ್ತಿತ್ತು. ಮಳೆ ಹನಿ ಅಧಿಕವಾದಂತೆ ಆತ ಅತೃಪ್ತಿಯಿಂದ ರಭಸವಾಗಿ ಕಾಲೆಳೆಯ ತೊಡಗಿದ. ಕಿಸೆಯಲ್ಲಿದ್ದ ಕರ್ಚೀಫನ್ನು ತೆಗೆದು ತಲೆಗೆ ಹಾಕಬೇಕೆಂದೆನಿಸಿದರೂ ಮರುಕ್ಷಣದಲ್ಲೆ ನಿರಾಸೆಯಿಂದ ಬೇಡವೆಂದೆನಿಸಿತು. ಒಡಲು ಒದ್ದೆಯಾದಾಗ ಮನಸ್ಸಿಗೆ ನೆಮ್ಮದಿಯುಂಟಾಯಿತು. ಅಂತಹ ಮಹಾನಗರದಿಂದ ನಿರ್ಗಮಿಸುವಾಗ ಅದೆಷ್ಟು ಸಂತೋಷದಿಂದ ಕಾಲೆಳೆದಿದ್ದನೋ ಅಷ್ಟೇ ತನ್ನ ಹುಟ್ಟು ಊರಾದ ಗ್ರಾಮಕ್ಕೆ ಅಡಿ ಇಡುವಾಗ ಹೃದಯ ತುಂಬ ತೊಡಗಿತು.

ಮಳೆ ನಿರಂತರವಾಗಿ ಬೀಳತೊಡಗಿತು. ದಿಗಂತದ ಗದ್ದೆಯ ಹಸಿರು ಪೈರುಗಳೆಲ್ಲಾ ಮಳೆಯಲ್ಲಿ ತೊಯ್ದು ತಲೆದೂಗುತ್ತಿದ್ದವು. ಅವನಿಗೆ ಮಳೆ ಎಂದರೆ ಬಾಲ್ಯದಿಂದಲೂ ಬಹಳ ಸಂತೋಷ. ಎಷ್ಟೋ ಸಾರಿ ಎಂತಹ ಜಡಿ ಮಳೆಯಲ್ಲೂ ಮನೆಯ ಅಂಗಳದಲ್ಲಿ ನಿಂತು ಕುಣಿದಾಡುತ್ತಿದ್ದ. ಯಾರೂ ಕಾಣಲಿಲ್ಲವೆಂದು ಅರಿವಾದಾಗ ಅಕ್ಕ ಬಂದು ಅವನಿಗೆ ತಿಳಿಯದೆ ಗದರಿಸಿ ಕೈ ಹಿಡಿದು ಜಗುಲಿಗೆ ಎಳೆದೊಯ್ದು-

'ಏ, ಬಾರೋ ಒಳಗೆ, ತಲೆ ಒದ್ದೆಯಾಗಿ ನಿಂಗೆ ಜ್ವರ ಬರೋದಿಲ್ವೇನೋ ತಲೆ ಒರೆಸ್ಕೊ' ಎಂದು ಹೇಳಿದಾಗ ಅವನು.

'ಜ್ವರ ಬರಲಿ' ಎನ್ನುತ್ತಿದ್ದ.

'ಜ್ವರ ಬಂದರೆ ಸತ್ಹೋಗ್ತಿಯೊ'

'ಸತ್ತು ಹೋಗಲಿ' ಎಂದು ಮೊಂಡುತನದ ಉತ್ತರ ಕೊಟ್ಟಾಗ ಅಕ್ಕನ ಕಂಠ ಬಿಗಿಯುತ್ತಿತ್ತು.

'ಮಗು ಹಾಗೆಲ್ಲಾ ಹೇಳ್ಬಾರದು, ಬಿಡ್ತು ಅನ್ನು. ಹಾಗೆ ಹೇಳಿದ್ರೆ ಪಾಪ ಬರ್ತದೆ. ನೀನು ಹೋದ್ರೆ ನಾನು ಯಾರನ್ನು ತಮ್ಮಾಂತ ಕರೀಲಿ? ನಿನ್ನ ಬಿಟ್ರೆ ನಂಗೆ ತಮ್ಮ ಅಂತ ಮತ್ಯಾರಿದ್ದಾರೆ?'

ಅವನ ಹಳೆಯ ನೆನಪುಗಳು ಮಳೆಯಲ್ಲಿ ತೋಯ್ದು ಕರಗಿ ಹೋದವು. ಆತ ಅಕ್ಕನನ್ನು ಕಂಡು ಎಷ್ಟೋ ವರ್ಷಗಳಾಗಿದ್ದವು. ಈಗ ಆಕೆ ತನ್ನನ್ನು ನೋಡುವಾಗಲಾದರೂ ಪರಿಚಯ ಸಿಗುತ್ತದೆಯೇ. ಖಂಡಿತವಾಗಿಯೂ ಸಿಗಲಾರದು. ಹೊಸ ಮಾದರಿಯ ಗಡ್ಡ ಮೀಸೆ ತುಂಬಿದ ಮುಖದ, ತೆಳುವಾದ

ಣಗಿದ ಶರೀರವಲ್ಲವೆ ಇದು. ಅಕ್ಕನಿಗೆ ವನ ಗುರುತು ಸಿಕ್ಕಲಾರದು. ಬಹುಶಃ ರುತು ಗೊತ್ತಾದರೆ ಮತ್ತೆ ಅವಳು ಷಾದಿಸಬಹುದು.

'ಅಕ್ಕ, ನಮ್ಮ ಆಶೆಗಳೆಲ್ಲಾ ೀವನದಲ್ಲಿ ಪಕ್ವವಾದರೆ ಜಗತ್ತಿನಲ್ಲಿ ಾಳಲು ಭವಿಷ್ಯದೊಡನೆ ಇಷ್ಟೆಲ್ಲಾ ೆಣಗಾಡಬೇಕೆ?' ಎಂದು ಅವನ ುನಸ್ಸು ಸ್ವಯಂ ಪ್ರಶ್ನಿಸಿತು.

ತೋಯ್ದು ನಿಸರ್ಗದಲ್ಲಿ ಅಡಿ ಡುತ್ತಾ ಸಾಗುತ್ತಿದ್ದ ಅವನ ಬೆನ್ನ ಹಿಂದೆ ತ್ತಲು ಕಪ್ಪು ಮುಸುಕು ಹೊದ್ದು ೆನ್ನಟ್ಟುತ್ತಿತ್ತು. ಮಳೆಯೊಡನೆ ಗಾಳಿಯ ಷ ಸರ್ಪದಂತೆ ರಭಸವಾಗಿ ಊದ ೊಡಗಿತು.



ಊರ ಹಳೆಯ ದೇವಾಲಯದ ೀಲ್ಬಾಗದಲ್ಲಿದ್ದ ಅಕ್ಕನ ಮನೆಯ ಡೆಗಿರುವ ಹಾದಿಯಲ್ಲಿ ಅಡಿ ಇಟ್ಟ, ಬಿದಿರಿನ ಮುಳ್ಳು ಕಡ್ಡಿಗಳಿಂದ ನಿರ್ಮಿಸಿದ ೇಲಿ, ಅದಕ್ಕೆ ಕಿರಿದಾದ ಒಂದು ಗೇಟು. ಮುಂದೆ ಅಡಿ ಇಟ್ಟಾಗ ಸಿಕ್ಕುವ ಅಂಗಳ ಪ್ಪು ಅಂಗಳ, ಬೇಸಗೆಯಲ್ಲಿ ಸಗಣಿ ಮಸಿ ತಿಕ್ಕಿ ಉಜ್ಜಿದ ನಯವೆಲ್ಲಾ ಮಳೆಯಲ್ಲಿ ರಗಿ ತೊನ್ನು ಹಿಡಿದವನ ಬೆನ್ನಿನಂತಿತ್ತು.

ಹಜಾರದಲ್ಲಿ ನಿಂತು ಮಳೆಯನ್ನು ಈಕ್ಷಿಸುತ್ತಿದ್ದ ಮಕ್ಕಳು ಅವನನ್ನು ಕಂಡು ುನೆಯೊಳಗೆ ಓಡಿದರು. ಕ್ಷಣದಲ್ಲಿ ಅಕ್ಕ ಬಾಗಿಲಲ್ಲಿ ಪ್ರತ್ಯಕ್ಷಳಾದಳು. ಕಿರಿದಾದ ೀಮೆ ಎಣ್ಣೆ ದೀಪದ ಮಂದ ಪ್ರಕಾಶದಲ್ಲಿ ಆಕೆಯ ಮುಖದ ಮೇಲೆ ದೆರಡು ಕ್ಷೀಣ ರೇಖೆಗಳು ಗೋಚರಿಸಿದವು. ಎಷ್ಟೋ ವರ್ಷಗಳ ಹಿಂದೆ ಕೆಲುವೆಯಾಗಿದ್ದ ಆ ಅಕ್ಕನಲ್ಲವೆ ಆತನ ಮುಂದೆ ಕೃಶವಾದ ಶರೀರವನ್ನು ೊತ್ತು ನಿಂತಿರುವುದು. ಕ್ಷಣಗಳು ದಿನಗಳಾಗಿ ವರ್ಷಗಳು ಅದೆಷ್ಟು ಬೇಗನೆ ಆಕೆಯ ಸೌಂದರ್ಯವನ್ನು ಕಸಿದುಕೊಂಡಿವೆ. ಅವನ ಕೈ ಹಿಡಿದು ಹುರುಪಿ ಂದ ಅದೆಷ್ಟು ಆವೇಶದಿಂದ ಅಕ್ಕ ದಿನಂಪ್ರತಿ ಶಾಲೆಗೆ ಕರೆದೊಯ್ಯುತ್ತಿದ್ದಳು.

ಅಕ್ಕನ ಕಣ್ಗಳ ಪರಿಶೋಧನೆ ಅವನ ಮೇಲೆ ತೀಕ್ಷ್ಣವಾದಂತೆ ಆತನು ಸುನಗುತ್ತಾ ಅಂಗಳದ ಮೆಟ್ಟಿಲುಗಳ ೀಲೇರಿದ.

'ನನ್ನ ಪರಿಚಯವಾಗಲಿಲ್ಲವೆ?' ಎಂದು ೀಳಿದ. ತಟ್ಟನೆ ಆಕೆಯ ಕಣ್ಗಳಲ್ಲಿ ಹೊಸ ಶ್ಮಿಯೊಂದು ಮಿಂಚಿದಂತಾಯಿತು. ಆಕೆಯ ಣ್ಣುಗಳು ಅವನನ್ನು ಮತ್ತೊಮ್ಮೆ ಪರೀಕ್ಷಿಸಿದವು. ಣದಲ್ಲಿ ಅವಳ ಅಂತರಂಗದಲ್ಲಿ ಹರ್ಷ ೂಬಿಟ್ಟಿತು. ಉಲಿದಳು. 'ಅಲ್ಲ ಕಣೋ, ನಿನ್ನ ೆರಳು ನೋಡಿದೊಡನೆ ನಂಗೆ ಗೊತ್ತಾಗೋದಿ ್ವೇನೋ. ಇವತ್ತು ಬೆಳಗ್ಗೆ ಮುಂಭಾಗದ ಕೊಂಬೆ ಮೇಲೆ ಕಾಗೆ ಕೂಗಿದಾಗ್ಲೇ ನೆನೆಸ್ಕೊಂಡೆ. ನೀನು ಿಂಡಿತಾ ಬರ್ತಿಯಾಂತ. ವರ್ಷಗಳೆಷ್ಟು ುಳುಗಿದವು. ಆದರೂ ನಿನ್ನನ್ನು ಈ ಅಕ್ಕ ುರೆತಿಲ್ಲ ಕಣೋ. ದಿನಾ ಬೆಳಕಾದೊಡ್ನೆ ೆನೆಯುತ್ತಾ ಇರ್ತೇನೆ, ಇವತ್ತು ಬರ್ತಿಯಾ ನಾಳೆ ರ್ತಿಯಾ ಅಂತ'

ತಾನೆಂದಾದರೂ ಆಕೆಗೆ ಒಂದು ಕಾಗದ ರೆಯುಬೇಕೆಂದು ನೆನೆಸಿದ್ದನೆ? ತಾನೊಬ್ಬ ುನುಷ್ಯನೇ? ಅಕ್ಕ ಬದುಕಿರುವಳೇ ಎಂದು ಮ್ಮೆಯಾದರೂ ಯೋಚಿಸಿದ್ದೇನೆಯೇ?

ಅಕ್ಕ ಆವೇಶದಿಂದ ಉದ್ಗಾರ ತೆಗೆದಳು.

'ಅಲ್ಲ ಕಣೋ, ಇಷ್ಟೊತ್ತು ನೀನು ಮಳೆಯಲ್ಲಿ ನಡೆದು ಹೀಗೆ ಒದ್ದೆ ಆಗಿದ್ದಿಯಾ. ಇನ್ನಾದ್ರೂ ನಿನ್ನ ಹಳೇ ದುರಾಭ್ಯಾಸನ್ನ ಬಿಡಲ್ವೆನೋ. ಒಳಗೆ ಬಂದು ತಲೆ ಉಜ್ಜಕೊಳ್ಳೋ' ಎಂದು ಆಕೆ ಒಳಗಿನಿಂದ ಕೈವಸ್ತ್ರವೊಂದನ್ನೆತ್ತಿ ಆತನ ಮುಂದೆ ನೀಡಿದಳು. ಎಣ್ಣೆಯ ಗಬ್ಬು ವಾಸನೆ ಬರುತ್ತಿತ್ತು.

'ಬೇಡ, ಬೇಡ. ಎಲ್ಲಾ ನನ್ನ ಪೆಟ್ಟಿಗೆಯಲ್ಲಿದೆ' ಎಂದ.

'ನಿನ್ನ ಪೆಟ್ಟಿಗೆ ಒದ್ದೆಯಾಗಿದೆ ಯಲ್ಲೋ'

'ಪರವಾ ಇಲ್ಲ'

ಆತ ತೋಯ್ದ ಉಡುಪನ್ನೆಲ್ಲಾ ಕಳಚಿ ಅಕ್ಕನಿಗೆ ನೀಡಿದ. ಆಕೆ ಅದೆಲ್ಲವನ್ನು ಒಳಗಿನ ತಂತಿಯ ಮೇಲೆ ಒಣಗಲು ಹಾಕಿದಳು. ಆತ ತಲೆ ಒರೆಸಿ ಉಡುಪು ಬದಲಾಯಿಸಿ ಕತ್ತಲು ತುಂಬಿದ ಕೊಠಡಿಯ ಮೂಲೆಯಲ್ಲಿದ್ದ ಕುರ್ಚಿಯೊಂದರಲ್ಲಿ ಆಸೀನನಾದ. ಅಷ್ಟರಲ್ಲಿ ಆಕೆ ಬಿಸಿ ಕಾಫಿಯೊಡನೆ ತಮ್ಮನೆಡೆಗೆ ಬಂದಳು.

'ನೀನು ಮಳೇಲಿ ಒದ್ದೆಯಾಗಿ ಅದೆಷ್ಟು ಸಾರಿ ಪೆಟ್ಟು ತಿಂದಿದ್ಯಾ ಅಪ್ಪನ ಹತ್ರ ಅಂತ ನಿನಗೆ ನೆನಪಿದೆಯೇನೊ,' ಅಕ್ಕನ ಮಾತಿನಲ್ಲಿ ಭೂತಕಾಲದ ಉತ್ಸಾಹ ಮೂಡಿತ್ತು.

ಆತ ಕಾಫಿಯನ್ನು ಮೆದುವಾಗಿ ಹೀರಿದ. ನಂತರ ಅಕ್ಕ ಉಲಿದಳು. 'ನಿನ್ಹಾಗೆ ಅದನ್ನು ನಾನು ಅಷ್ಟು ಸುಲಭವಾಗಿ ಮರೆಯಲು ಸಾಧ್ಯವೇನೊ?'

'ನಾನು ಮರೆತಿಲ್ಲ' ಎಂದಷ್ಟೆ ಹೇಳಿದ.

'ಮತ್ತೆ ಯಾಕೋ ನೀನು ಇಷ್ಟು ವರ್ಷಗಳಾದರೂ ನನ್ನನ್ನು ಒಮ್ಮೆ ಬಂದು ನೋಡಲಿಲ್ಲ? ಅಲ್ಲ ಕಣೋ, ಒಂದು ಕಾಗ್ದವನ್ನಾದ್ರೂ...' ಆಕೆಯ ಮಾತು ಅಪೂರ್ಣಗೊಂಡಿತು. ಆತನೂ ಮೂಕನಾಗಿಯೇ ಕುಳಿತಿದ್ದ. ಅವನ ದೃಷ್ಟಿ ಕಿಟಕಿಯ ಹೊರಗಿನ ಕಪ್ಪು ಜಗತ್ತಿನಲ್ಲಿ ಲೀನವಾಗಿತ್ತು. ಆತ ಮತ್ತೆ ಅವಳ ಮುಖವನ್ನು ನೋಡಲಿಲ್ಲ. ಮೌನವನ್ನು ಮುರಿದು ಅವಳೇ ಮಾತನಾಡಲು ತೊಡಗಿದಳು.

'ನೀನು ಇಲ್ಲಿ ಬೆಳಕಿನಲ್ಲಿ ಕೂರಬಾರದಾಗಿತ್ತಾ, ಯಾಕೆ ಕತ್ತಲಿನಲ್ಲಿ ಕುಳಿತುಕೊಂಡಿದ್ಯಾ?'

'ಬೇಡ. ಇಲ್ಲೇ ಸಾಕು'

ಅಕ್ಕ ಅವನ ಕಾಲಿನ ಬಳಿಯಲ್ಲೇ ನೆಲದ ಮೇಲೆ ಕುಳಿತುಕೊಂಡಳು. ಅವಳ ಮಕ್ಕಳು ಯಾವುದನ್ನು ಅರಿಯದೆ ದಿಗ್ಭ್ರಾಂತರಾಗಿ ಕಣ್ಣು ಬಿಡುತ್ತಾ ಅವರೀರ್ವರನ್ನು ನೋಡುತ್ತಿದ್ದರು. ಅಕ್ಕನ ವಿಶಾಲವಾದ ಕಣ್ಗಳು ಅವನ ಗಡ್ಡ ತುಂಬಿದ ಮುಖದ ಮೇಲೆ ನಾಟಿದವು. ಬಹುಶಃ ಆತ ನಸು ನಗುತ್ತಿದ್ದರೂ ಅದು ಕತ್ತಲಿನಲ್ಲಿ ಅಸ್ಪಷ್ಟವಾಗಿತ್ತು. ಅಕ್ಕನಿಗೆ ನಾಲ್ಕು ಜನ ಮಕ್ಕಳಿದ್ದಾರೆಂದು ಅವು ಆತನನ್ನು ಬಳಸಿಕೊಂಡಿರುವುದರಿಂದ ಅವನಿಗೆ ಸ್ಪಷ್ಟವಾಯಿತು. ಹಿರಿಯರಿಬ್ಬರೂ ಹುಡುಗ ರಾಗಿದ್ದರು. ಕಿರಿಯವಳಿಗೆ ಬಹುಶಃ ಮೂರು ವರ್ಷ ದಾಟಿರಬೇಕು. ಇನ್ನೊಬ್ಬಳು ಇನ್ನೂ ಹಸುಳೆ. ಅಕ್ಕನಂತೆ ಅವಳ ಮಕ್ಕಳೂ ಕೊಳಕಾದ ಮಾಸಿದ ಉಡುಪುಗಳನ್ನೇ ಧರಿಸಿದ್ದರು. ಆಕೆಯ

## ಬದಲಾವಣೆ



ಮದುವೆಗೆ ಮುನ್ನ
ನಡೆ-ಚೆನ್ನ
ನುಡಿ ಚೆನ್ನ
ನಡು ಚೆನ್ನ
ನಂತರ
ಎಲ್ಲಾ-ಭಿನ್ನ

■ ಹೆಚ್.ಎಸ್.ಸೋಮಶೇಖರ್.

## ವಿಪರ್ಯಾಸ



ಸೂರ್ಯನ ಕಿರಣ ಬಿದ್ದಾಗ
ಕಮಲ ಅರಳಿದರೆ
ಗಂಡಿನ ದೃಷ್ಟಿ ಬಿದ್ದಾಗ
ಹೆಣ್ಣು ಮುದುಡುತ್ತಾಳೆ.

■ ನಿವೇದಿತಾ ಕುದ್ವಾಜಿ

ಪರಿಚಯ ಅಷ್ಟು ಬೇಗನೆ ಯಾರಿಗೂ ಸಿಗುವಂತಿರಲಿಲ್ಲ. ತಮಾಷೆಗಾಗಿ ಅಕ್ಕನ ಬಳಿ ಕೇಳಬೇಕೆಂದಿದ್ದ. 'ಅಕ್ಕ ನೀನು ಹೇಳುತ್ತಿರಲಿಲ್ಲವೇ ಮನೆ ತುಂಬಾ ಮಕ್ಕಳಿರುವುದು ಸೌಭಾಗ್ಯ ಅಂತ. ಮತ್ತೇಕೆ ನಾಲ್ಕು ಮಕ್ಕಳಿಗೆ ನಿಲ್ಲಿಸಿದೆ?' ಎಂದ.ಈ ಮಕ್ಕಳಿಗೆ ಚಾಕಲೇಟು ಸಹ ತರಬೇಕೆಂದು ಅನಿಸಲಿಲ್ಲ.

ಮಕ್ಕಳ ಕುತೂಹಲವನ್ನು ಕಂಡ ಅಕ್ಕ ಹೇಳಿದಳು.

'ಮಕ್ಕಳೇ, ನಾನು ಹೇಳ್ತಿರಲಿಲ್ಲವೆ ನಿಮಗೊಂದು ಮಾಮ ಇದ್ದಾರೇಂತ; ಅವರೇ ಇವರು' ಅಷ್ಟರಲ್ಲಿ ಹಿರಿಯ ಹುಡುಗ ಅವನನ್ನು ನೋಡಿ ಮುಗುಳ್ನಗಲು ಮುಖ ಅರಳಿಸಿದ. ಮತ್ತೆ ಅಕ್ಕನೆ ಪ್ರಾರಂಭಿಸಿದಳು 'ನಿನಗೆ ಗೊತ್ತಿಲ್ವೇನೋ, ಇವನಿಗೆ ಎರಡು ವರ್ಷ ತುಂಬುವಾಗ ನೀನು ಮನೆ ಬಿಟ್ಟಿದ್ದು. ಈಗ ಇವ್ನಿಗೆ ಹತ್ತು ವರ್ಷ ನಾಲ್ಕು ತಿಂಗಳಾಯ್ತು' ಆಕೆ ಕೈ ಬೆರಳೆಣಿಸಿ ಉಲಿದಳು.

'ಎಷ್ಟು ಬೇಗ ವರ್ಷಗಳು ಉರುಳಿದವು ನೀನು ಎಲ್ಲವನ್ನೂ ತೊರೆದು ಹೋದಾಗ ನಾನೆಷ್ಟು ಕಣ್ಣೀರಿಟ್ಟೆ ಗೊತ್ತಾ. ನಿನ್ನ ಭಾವನಿಗೆ ನನ್ನನ್ನು ಸಮಾಧಾನ ಪಡಿಸಲು ಅಸಾಧ್ಯವಾಗಿತ್ತು. ಈ ಮಕ್ಕಳ ನಗುಮುಖದಿಂದಾಗಿ ನನ್ನ ದುಃಖವನ್ನು ಅಡಗಿಸಬೇಕಾಯ್ತು. ನೀನಿಲ್ಲದಾಗ ಅವೆಷ್ಟು ಜಾತ್ರೆಗಳು ಸಮಾರಂಭಗಳು ನಮ್ಮ ಊರಿನಲ್ಲಿ ಕಳೆದು ಹೋಗಿವೆ ಗೊತ್ತ? ವಿಧ ವಿಧದ ಸಂಭಾವಗಳು ನಡೆದರೂ ನನಗೆ ಯಾವುದೂ ಸಂತೋಷವನ್ನು ಉಂಟು ಮಾಡಿರಲಿಲ್ಲ. ಆದರೆ ನಮಗೆ ಖಂಡಿತವಾಗಿಯೂ ಗೊತ್ತಿತ್ತು. ನೀನು ಎಂದಾದರೂ ಒಂದು ದಿನ ಬಂದೇ ಬರ್ತಿಯಾಂತ. ಒಂದು ಮಳೆಗಾಲದಲ್ಲಿ....' ಅಪೂರ್ಣಗೊಂಡ ಮಾತಿನೊಡನೆ ಅಕ್ಕನ ಕಂಠ ಬಿಗಿದು ಬಂದಿತು.

'ಭಾವ ಎಲ್ಲಿ ಹೋದರು?' ಆತ ಕೇಳಿದ.

'ಅಂಗಡಿಯಿಂದ ಇನ್ನೂ ಬರಲಿಲ್ಲ. ಈಗ ಹಗಲೂ ರಾತ್ರಿ ಅಂಗಡಿಯಲ್ಲಿಯೇ. ನೀನು, ಬಂದಿರುವುದು ಅವರಿಗೆ ಗೊತ್ತಿಲ್ಲ. ಇಲ್ಲದಿದ್ರೆ ಓಡಿ ಬರ್ತಿದ್ದರು'

'ಈಗ ವ್ಯಾಪಾರ ಹೇಗಿದೆ?'

'ಪರವಾ ಇಲ್ಲ'

'ಹಳೆಯ ವಾಯುವಿನ ಕಾಯಿಲೆ ಎಲ್ಲ ವಾಸಿ ಆಯ್ತಾ?'

'ಹ್ಞೂ' ಎಂದಳಷ್ಟೆ.

ಮಳೆ ಈಗ ಸುಮಾರಾಗಿ ನಿಂತಿತ್ತು. ಕತ್ತಲು ಹೊರಗೆಲ್ಲಾ ಭೂತಾಕಾರದಲ್ಲಿ ಪಸರಿಸಿತು. ಆಗಾಗ ಭೀಕರವಾದ ಗಾಳಿ ಗರ್ಜಿಸುತ್ತಿತ್ತು. ಕಿಟಕಿಯ ಸಂದಿನಿಂದ ತೂರಿ ಬರುತ್ತಿದ್ದ ತಂಪುಗಾಳಿ ಮೈಗೆ ಸೋಂಕಿದಾಗ ಹಾಯೆನಿಸುತ್ತಿತ್ತು. ಅಕ್ಕ ತನ್ನ ಅಂತರಂಗದ ವೇದನೆಯನ್ನು ಕೆದಕಿದಳು.

'ಅಪ್ಪ ತೀರಿ ಹೋದದ್ದು ಗೊತ್ತಾಯ್ತಾ?'

'ಹ್ಞೂ' ಎಂದಷ್ಟೆ ತಲೆ ಆಡಿಸಿದ.

'ತಿಳಿದೂ ಬರಬೇಕೆಂದು ಅನಿಸಲಿಲ್ಲವೇ?'

'ಸುಮಾರು ತಿಂಗಳು ಕಳೆದ ಬಳಿಕ ನನಗೆ ಗೊತ್ತಾಗಿದ್ದು'

'ಆಗ ನೀನೆಲ್ಲಿದ್ದೆ?'

ಆತ ಮರುನುಡಿಯಲಿಲ್ಲ.

ಹೊರನಾಡಿನ ವಿಶಾಲವಾದ ಒಂದು ಪಟ್ಟಣದಲ್ಲಿದ್ದ, ನಗರದಿಂದ ಪಟ್ಟಣಕ್ಕಿರುವ ಪ್ರಯಾಣವಾಗಿತ್ತು. ಆಗ ಯಾರೋ ಪರಿಚಿತ ಸಿಕ್ಕಿ ತಂದೆಯ ಮರಣವಾರ್ತೆಯನ್ನು ತಿಳಿದಿದ್ದ. ಆಗ ಯಾವ ತರದ ದುಃಖವೂ ಆಗಲಿಲ್ಲ. ಒಂದು ಕ್ಷಣ ತಂದೆಯನ್ನು ಸ್ಮರಿಸಿ ನಿಂತಿದ್ದ, ಅಷ್ಟೆ. ಮತ್ತೆ ಎಂದಿನಂತೆ ಯಾತ್ರೆಯಾಗಿತ್ತು. ಅವನು ಆಗ ಮರಳಿ ಬರುವ ಸ್ಥಿತಿಯಲ್ಲಿರಲಿಲ್ಲ. ಅವನ ಆಕಾಂಕ್ಷೆಯೇ ಅನ್ಯವಾಗಿತ್ತು. ಇಲ್ಲವಾದರೆ ಅವನು ಬಿ.ಎ. ಫೈನಲ್‌ನಲ್ಲಿ ಓದುತ್ತಿದ್ದಾಗ ಈ ರೀತಿ ಮನೆ ಬಿ ಹೋಗಬೇಕಾಗಿತ್ತೇ? ತಟ್ಟನೆ ಅಮ್ಮ ಕ ಮುಚ್ಚಿದಳು. ಕಾಲಿನಲ್ಲಿ ಕುರುವಾಗಿ ಒಂದು ವಾ ಜ್ವರದಿಂದ ನರಳುತ್ತಿದ್ದ. ಹೃದಯದ ಯಾವುದೋ ವೇದನೆ ಕೊನರುತ್ತಿತ್ತು. ಅಷ್ಟರ ಅಕ್ಕನ ವಿವಾಹವಾಯಿತು. ಅವಳೂ ಗಂಡನ ಪ ಸೇರಿದಳು. ಓಣಿಯಲ್ಲಿ ವಿಶಾಲವಾದ ಮನೆಯ ಮತ್ತೆ ತಾನು ತಂದೆ ಇಬ್ಬರೇ ಉಳಿದವರ ಅಪ್ಪ-ಮಗನಲ್ಲಿ ಸದಾ ಮೌನ ತುಂಬಿರುತ್ತಿತ ದಿನದಿಂದ ದಿನಕ್ಕೆ ಅವರಿಬ್ಬರ ವೈಯಕ್ತಿ ಭಾವನೆಗಳು ಅಸಹ್ಯಕರವಾಗಿ ಮಾರ್ಪಟ್ಟ ಇನ್ನು ಮುಂದೆ ಆ ಮನೆಯಲ್ಲಿ ನಿಲ್ಲುವು ಸರಿಯಲ್ಲವೆಂದೆನಿಸತು. ವಿದ್ಯೆಗೆ ಶರ ಹೊಡೆದು ಮನೆಯಿಂದ ಕಾಲು ಕಿತ್ತ.

ಇಬ್ಬರಲ್ಲಿನ ಮೌನವನ್ನು ಮುರಿದು ಅ ಕೇಳಿದಳು.

'ಈಗ ನಿನ್ನ ವಾಸ ಎಲ್ಲಿ?'

'ಒಂದೇ ಸ್ಥಳಾಂತ ಇಲ್ಲ'

'ಕೆಲಸವೋ?'

'ಎಲ್ಲಿಗೆ ಹೋದರೂ ನಂಗೆ ಒಂದೊಂದು ಕೆಲ್ಸ ದೊರೆಯುತ್ತದೆ.'

'ನೀನು ಹೇಗಾದ್ರೂ ಜೀವಿಸ್ತಿಯಾಂತ ನಂಗೆ ಗೊತ್ತು' ನಿಟ್ಟುಸಿರು ಬಿಟ್ಟಳ. 'ಪುನಃ ಎಲ್ಲಾದರೂ ಏನಾದರೂ ಕೆಲ್ಸ ಮಾಡಿ ಜೀವಿಸಿದರೆ ಸಾಕೇನೋ. ನಿ ಮೇಲೆ ನಾನು ಯಾವ್ಯಾವ ಕನಸು ಕಟ್ಟಿದ್ದೆ ಗೊತ್ತಾ' ಅಂದಾಗ ಆತ ಮರ ನುಡಿಯಲಿಲ್ಲ. ಒಂದು ಕ್ಷಣ ಮೌನದ ನಂತರ ಆಕೆ ಪುನಃ ಕೇಳಿದಳು, 'ನೀನ ಮತ್ತೆ ಹೋಗ್ತಿಯಾ?' ಆತ ಮೌನಿಯಾದ. ಅವನ ಮೌನವನ್ನು ಸ್ಪಷ್ಟಪಡಿಸಿ ಅಕ್ಕ, 'ಇನ್ನೆಲ್ಲೂ ಹೋಗ್ಬೇಡಪ್ಪ. ನಮ್ಮ ಮನೆ ನೋಡ್ಲಿಕ್ಕೆ ಯಾರೂ ಇಲ್ಲ. ನೀನ ಇಲ್ಲೇ ನಿಂತರೆ ಸಾಕು ದೇವರು ನಿನಗೆ ಒಳ್ಳೆ ಮಾರ್ಗ ತೋರಿಸ್ತಾನೆ' ಎಂದಳು.

ಹೊರಗೆ ಗಾಳಿ ರಭಸವಾಗಿ ಬೀಸಿದಾಗ ಮಳೆಯ ಹನಿ ಹಜಾರದ ಮೇ ಎರಚಿತು. ಒಳಗೆ ನುಗ್ಗಿದ ಗಾಳಿಗೆ ಸೀಮೆಎಣ್ಣೆ ದೀಪ ಒಮ್ಮೆ ನಂ ಹೋಗುವಂತೆ ತುಸು ಕ್ಷೀಣವಾಗಿ ಮತ್ತೆ ಪ್ರಜ್ವಲಿಸತೊಡಗಿತು. ಅಕ್ಕ ಮ ಸಡಿಲಗೊಂಡ ಮಾತಿನ ಮಾಲೆಯನ್ನು ಹೆಣೆಯತೊಡಗಿದಳು.

'ಪ್ರಸನ್ನ ನಿಂಗೆ ಗೊತ್ತಿಲ್ವಾ ಅವಳ್ನ ಒಬ್ಬ ದೊಡ್ಡ ಉದ್ಯೋಗಸ್ಥ ಬಂದ ಮದ್ವೆ ಮಾಡಿದ. ಕಾರು ಬಂಗ್ಲೆ ಇರುವಾತ. ಆಕೆ ನಿಜವಾಗಿಯೂ ಭಾಗ್ಯಶಾ ಅಂದುಕೊಂಡಿದ್ದೆ. ವಿವಾಹವಾದ ಒಂದು ವಾರದಲ್ಲೆ ಆತ ಕಾರು ಅಪಘಾತದಲ್ಲಿ ಸತ್ತು ಹೋದ. ಈಗ ಅವಳು ಹುಚ್ಚಿಯಾಗಿ ಸುತ್ತುತ್ತಿದ್ದಾಳೆ ನಮ್ಮ ಗೋವಿಂದ ಮಾವ ಕಳೆದ ವರ್ಷ ಕ್ಯಾನ್ಸರಿನಿಂದ ಸತ್ತು ಹೋದರು. ನಮ್ಮ ಸುಲೋಚನ ಇಲ್ಲೇ ಇದ್ದಾಳೆ. ಅವಳು ಯಾವಾಗ್ಲೂ ನಿನ್ನ ವಿಷಯ ಕೇಳ್ತಾ ಇರ್ತಾಳೆ.'

ತಟ್ಟನೆ ಆತ ಕೇಳಿದ 'ಅವಳ ಮದುವೆ ಆಗ್ಲಿಲ್ವಾ?'

'ಅವಳು ನಿನ್ನ ಮರೀತಾಳೇನೋ, ಅವಳಿಗೆ ಸಹ ಒಂದೆರಡು ಜನ ಕೇಳಿಕೊಂಡು ಬಂದಿದ್ದರು, ಬೇಡಾಂದಳು'

ಸಹಜವಾಗಿಯೂ ಅಚ್ಚರಿಯ ಸಂಗತಿ! ತಾನಿಷ್ಟು ವರ್ಷಗಳಿಂದ ಅದೇಕೆ ಸುಲೋಚನಳನ್ನು ಸಂಪೂರ್ಣ ಮರೆತಿದ್ದೆ. ಉದ್ದವಾದ ಮೂಗು, ತೊಂಡೆ ಹಣ್ಣಿನ ವರ್ಣ ತುಂಬಿದ ತುಟಿಗಳಿರುವ ಪುಟ್ಟದಾದ ಮುಖದ ಸುಂದರಿ ಸುಲೋಚನಳನ್ನು ತಾನೆಷ್ಟೊ ಬಾರಿ ಕೂಗಿಸುತ್ತಿದ್ದೆ. ಅಕ್ಕ ನಮ್ಮಿಬ್ಬರನ್ನು ಶಾಲೆಗೆ ನಡೆಸಿಕೊಂಡು ಹೋಗುತ್ತಿದ್ದಳು. ಅಕ್ಕನ ಎರಡು ತೋಳುಗಳಲ್ಲಿ ನಾವಿಬ್ಬರೂ ಎಷ್ಟೋ ಬಾರಿ ಜೋತಾಡಿ, ಬೊಬ್ಬೆ, ಚೇಷ್ಟೆ ಮಾಡಿ ಕೆಲವು ಬಾರಿ ಅವಳ ಮುಖ ಪರಚಿದ್ದೆ. ಆಗ ಅಕ್ಕ ನಮ್ಮಿಬ್ಬರ ಮಧ್ಯೆ ಅಡ್ಡ ನಿಲ್ಲುತ್ತಿದ್ದಳು, 'ನೀನು ಸುಮ್ಮನಿರು. ಅವಳಿನ್ನೂ ಚಿಕ್ಕ ಹುಡುಗಿ ಅಲ್ವೇನೋ ಅವಳು ಅಳ್ತಾ ಇದ್ದಾಳೆ ನೋಡು' 'ಮತ್ತೆ ಅವಳಿಗೆ ಯಾಕಷ್ಟು ಗರ್ವ' ಎಂದು ತಾನು ಹೇಳುತ್ತಿದ್ದೆ 'ನನ್ನ ಮುದ್ದು ಕೂಸಲ್ಲವೇನೊ ಸುಮ್ಮ ಇರು ರಾಜ. ಬೇಡ, ಬೇಡ' ಅವಳ ಕಣ್ಗಳಿಂದ

ರಾಕಾರವಾಗಿ ಹನಿ ಉದುರಿದಾಗ ಮಾತ್ರ ತಾನು ಸುಮ್ಮನಾಗುತ್ತಿದ್ದೆ.

ಇಬ್ಬರೂ ಬೆಳೆದಂತೆಯೆ ಇಬ್ಬರ ಜಗಳವೂ ಅಡಗಿ ಹೋಗಿತ್ತು. ಯಾವುದನ್ನು ಅಷ್ಟು ಸುಲಭವಾಗಿ ಬಿಟ್ಟು ಕೊಡುವ ಮನಸ್ಸಾಗಿರಲಿಲ್ಲ ವಳದು. ಸಕಲವೂ ಅಳುವಿನಿಂದಲೇ ಮುಕ್ತಾಯವಾಗುತ್ತಿತ್ತು.

ಅಮ್ಮ ಹೇಳುತ್ತಿದ್ದರು, 'ಇವರಿಬ್ಬರನ್ನು ಮದ್ವೆ ಮಾಡಿಸಿದರೂ ಇವರ ಜಗಳ ಲ್ಲೋದಿಲ್ಲ. ಇಬ್ಬರೂ ಹೊಡೆದಾಡಿ ಸಾಯಬೇಕಾಗ್ತದೆ. ಮನೇಲಿ ಒಬ್ಬ ಪೊಲೀಸನ್ನೆ ಬಿಡ್ಬೇಕಾಗುತ್ತೆ' ಇದನ್ನು ಕೇಳುವಾಗ ಅಕ್ಕ ಬಾಯಿಗೆ ಕೈಯಿಟ್ಟು ಲುಕುಲು ನಗುತ್ತಿದ್ದಳು. ಸುಲೋಚನ ಅವನ ಭಾವಿ ಪತ್ನಿಯೆಂದು ಗಲುಗನಸು ಕಂಡ ಒಂದು ರಮ್ಯ ದಿನವಾಗಿತ್ತು ಅಂದು.

ಭೀಕರವಾದ ನಿಶೆಯನ್ನು ಸೀಳಿಕೊಂಡು ಬರುತ್ತಿರುವ ಟಾರ್ಚ್ ಲೈಟಿನ ಕಾಶದೊಡನೆ ಭಾವ ಮೆಟ್ಟಿಲೇರಿ ಒಳ ಬಂದರು. ಕೊಳಕಾದ ತೊಟ್ಟ ಡುಪಿನಂತೆ ಕೈಯಲ್ಲಿದ್ದ ಕೈ ಚೀಲವೂ ಇತ್ತು. ಅದರ ತುಂಬಾ ಮಾನುಗಳಿದ್ದವು. ಅಕ್ಕ ಅದನ್ನು ಇಸಿದುಕೊಳ್ಳುತ್ತಾ ಮುನ್ನುಗ್ಗಿ ಬಂದು ರ್ಷದಿಂದ, 'ತಮ್ಮ ಬಂದಿದ್ದಾನೆ' ಎಂದು ಹೇಳಿದಳು. ಭಾವ ಬೆಳಕಿನೆಡೆಗೆ ಂದು ಒಮ್ಮೆ ಮಂದಹಾಸ ಬೀರಿದರು. ಒಂದೆರಡು ಘಳಿಗೆ ಭಾವನ ಕಣ್ಣುಗಳು ತನ ಒಡಲಲ್ಲಿ ನಾಟಿದವು.

'ರಾಘು, ಇದೇನೋ ವೇಷ? ನಿನಗೇನಾಗಿತ್ತು? ನೀನೆಲ್ಲಿದ್ದೆ ಇಷ್ಟು ರ್ಷ?' ಅವರ ಕಂಠ ತುಸು ಗಡಸಾಗಿತ್ತು. ಆಗ ಆತ ನಸುನಗುತ್ತಿದ್ದ. ಮತ್ತೆ ವರು, 'ಏನಾದರೂ ಆಗಲಿ, ಇವನು ಬಂದನಲ್ಲ' ಎಂದು ತಮ್ಮಷ್ಟಕ್ಕೆ ತಾವು ಳಿಕೊಂಡು ಗಹಿಗಹಿಸಿ ನಕ್ಕರು. ಮತ್ತೆ ಏನೇನೋ ಕೇಳಿದರು. ಆದರೆ ಯಾವುದಕ್ಕೂ ಆತನಿಂದ ಯಾವ ಉತ್ತರವೂ ಬರಲಿಲ್ಲ. ಆದರೆ ಮಾತನಾಡಲು ಪ್ರಾರಂಭಿಸಿದರು.

'ಸೇಲ್ಸ್ ಟ್ಯಾಕ್ಸ್ ಆಫೀಸರ್ ಮತ್ತು ಸಾಲಗಾರರ ತೊಂದರೆ, ಹುಮುಖ್ಯವಾಗಿ ಗ್ರಾಮದ ದಾರಿದ್ರ್ಯ; ಇವೆಲ್ಲಾ ನಮ್ಮ ಇಲ್ಲಿಯ ಸಮಾಚಾರ' ಏಕಾಭಿರಾಮವಾದ ಒಂದೆರಡು ಮಾತನಾಡಿದರು. ವಿಶಾಲ ಲೋಕದ ತರ ವಿಷಯಗಳೆಲ್ಲಾ ಅವರ ಪಾಲಿಗೆ ಶೂನ್ಯವಾಗಿದ್ದವು. ಬಹುಶಃ ತನ್ನ ಳ್ಳಿಗಿಂತ ಹಿರಿಯ ಲೋಕವೇ ಇನ್ನೊಂದಿಲ್ಲ ಎಂಬುದಾಗಿರಬೇಕು ಅವರ ಾತಿನ ಭಾವ! ಈಗ ಆ ಭಾವನ ಹೊಟ್ಟೆ ತುಂಬಾ ಮುಂದೆ ಬಂದು ಆತನೊಬ್ಬ ್ಯಾಪಾರಿಯೆಂದು ಸಾರಿ ಹೇಳುತ್ತಿತ್ತು. ತಲೆಯಲ್ಲಿನ ಕೂದಲೆಲ್ಲಾ ಉದುರಿ ೆಂಬಿನಂತಿತ್ತು ಬುರುಡೆ.

ಭಾವ ಅಕ್ಕನನ್ನು ವಿವಾಹವಾದ ಹೊಸದರಲ್ಲಿ ಅವರಿಗೆ ತನ್ನ ಮೇಲೆ ತುಸು ದ್ವೇಷವಿತ್ತೆಂಬುದನ್ನು ನೆನೆಸಿಕೊಂಡ. ಅವರಿಬ್ಬರ ವಿವಾಹವಾದ ಮೊದಲಿನಲ್ಲಿ ಆತ ಅವರ ಮನೆಯ ಹೊಸಿಲು ಮುಟ್ಟುತ್ತಿರಲಿಲ್ಲ. ಭಾವನೊಡನೆ ಬಾಯಿಬಿಟ್ಟು ಮಾತನಾಡುವ ಸಂದರ್ಭ ಸಹ ದೊರಕುತ್ತಿರಲಿಲ್ಲ.

ಅಷ್ಟರಲ್ಲಿ ಮೌನವನ್ನು ಮುರಿಯುತ್ತ ಭಾವನ ಧ್ವನಿ ಬಂತು.

'ರಾಘವನಿಗೆ ಒಂದು ವ್ಯಾಪಾರ ಮಾಡಿಕೊಂಡು ಇಲ್ಲೇ ನಿಂತರಾಯ್ತು'

'ಹೌದು, ನಾನು ಸಹ ಅದ್ನೆ ಹೇಳ್ತಿರೋದು. ಮತ್ತೆ ನಮ್ಮ ಸುಲೋಚನ ಸಹ ಇದ್ದಾಳಲ್ಲ' ಎಂದು ಅಕ್ಕನೂ ದನಿಗೂಡಿಸಿದಳು.

'ಹೌದು ಹೌದು ಅದ್ನ ಎಷ್ಟು ದಿನಾಂತ ಹೀಗೆ ಕಾಯೋದು?' ಎಂದು ಭಾವ ಹೇಳಿದರು. ಹುಲ್ಲು ಚಾಪೆಯ ಮೇಲೆ ಊಟಕ್ಕೆ ಕುಳಿತಾಗ ಮನಸ್ಸು ತುಸು ಹಗುರ ವಾದಂತಾಯಿತು. ಪುಳಿಯೋಗರೆ, ಮಾವಿನ ಹಣ್ಣಿನ ರಸ ಬಹಳ ರುಚಿಯಾಗಿದ್ದವು. ಇದನ್ನು ತಿಂದು ಅವೆಷ್ಟು ವರ್ಷಗಳಾಗಿದ್ದವು! ಅಕ್ಕ ಎಲೆಯಲ್ಲಿ ಬಡಿಸುತ್ತಿದ್ದಾಗ ಹಳೆಯ ನೆನಪಿನ ಕಣಗಳು ಚಿತ್ರ ಭಿತ್ತಿಯಲ್ಲಿ ಮೂಡತೊಡಗಿದವು. ಆಗ ತಾನು ಬಹಳ ಕಿರಿಯವನಾದಂತೆ ಅನಿಸಿತು ಅವನಿಗೆ. ಪಕ್ಕದಲ್ಲಿ ಕುಳಿತಿದ್ದ ಅಕ್ಕ ಮೃದುವಾಗಿ ಉಲಿದಳು, 'ನಮ್ಮ ಊಟ ನಿನಗೆ ಹಿಡಿಸಿತೋ ಏನೋ, ನಿನಗಾಗಿ ಪ್ರತ್ಯೇಕವಾಗಿ ನಾನು ಏನನ್ನೂ ಮಾಡ್ಲಿಲ್ಲ' ಅಷ್ಟರಲ್ಲಿ ಸಮೀಪದಲ್ಲಿದ್ದ ಭಾವ ನಸುನಗುತ್ತಾ ಹೇಳಿದರು; 'ಇವತ್ತಿನದು ಹೇಗೂ ಆಯ್ತಲ್ಲ, ಇನ್ನು ನಾಳೇದ್ನ ಸರಿಯಾಗಿ ಗಮನಿಸಿಕೊ, ಆಯ್ತಾ'

ಊಟವಾದ ಬಳಿಕ ದಕ್ಷಿಣ ಭಾಗದಲ್ಲಿರುವ ಕೊಠಡಿಯಲ್ಲಿ ಚಾಪೆ ಹಾಸಿ ಕೊಟ್ಟಳು. ಅದೇ ಕೋಣೆಯಲ್ಲಿ ಆತ ಒಮ್ಮೆ ಮಲಗಿದ್ದ. ಆಗ ಕೋಣೆ ಇಷ್ಟೊಂದು ಓರಣವಾಗಿರಲಿಲ್ಲ. ಈಗ ಒಂದು ಕಿಟಕಿಯನ್ನು ಸಹ ಇಡಿಸಿದ್ದರು. ಮೊದಲು ಹಗಲಿನಲ್ಲಿ ಕೂಡ ಆ ಕೋಣೆಯಲ್ಲಿ ಕತ್ತಲು ತುಂಬಿತ್ತು. ಅದೂ ಅಲ್ಲದೆ ಭತ್ತದ ಹೊಸ ವಾಸನೆ ತುಂಬಿಕೊಂಡಿತ್ತು. ಈಗ ಹೊರಗೆ ಧಾರಾಳವಾಗಿ ಮಳೆ ಬಿದ್ದುದರಿಂದಲೋ ಏನೋ ಕೋಣೆಯಲ್ಲಿ ಮಣ್ಣಿನ ವಾಸನೆ ತುಂಬಿತ್ತು.

ಕೋಣೆಯ ಸೀಮೆ ಎಣ್ಣೆ ದೀಪವನ್ನು ಊದಿ ಕೆಡಿಸಬೇಕಾಗಿರಲಿಲ್ಲ. ಕಿಡಕಿಯ ಸಂದಿನಿಂದ ತೂರಿ ಬಂದ ಗಾಳಿಗೆ ಅದು ನಂದಿ ಹೋಯಿತು. ಗರ್ಜಿಸಿ ಬೀಸುತ್ತಿದ್ದ ಗಾಳಿಯೊಡನೆ ಮಳೆಯೂ ಒಂದಾಯಿತು. ನಿಧಾನವಾಗಿ ಬೀಳುತ್ತಿದ್ದ ಮಳೆ ಕ್ಷಣದಲ್ಲಿ ಅವ್ಯಾಹತವಾಗಿ ಉದುರಿತು.

ಎಳೆಯ ಪ್ರಾಯದಲ್ಲಿ ಮಳೆಗಾಲದ ಒಂದು ದಿನ ರಾತ್ರಿ ನಡೆದ ಘಟನೆಯನ್ನು ನೆನೆಯುತ್ತಾ ಹೊರಗೆ ಬೀಳುತ್ತಿದ್ದ ಮಳೆಯೊಂದಿಗೆ ಹೃದಯ ಬೆಸೆಯತೊಡಗಿತು.

ಬೆಳಿಗ್ಗೆ ಎದ್ದು ಕಣ್ಣುಜ್ಜಿ ನೋಡಿದಾಗ ಸುಲೋಚನಾಳ ಅರಳಿದ ಪ್ರಕಾಶಮಾನವಾದ ಮುಖ ಚೌಕಟ್ಟಿನೊಳಗಿತ್ತು. ಆಕೆಯ ಕಣ್ಣಿನ ಅದ್ಭುತ ಅಚ್ಚರಿಯ ದೃಷ್ಟಿ ಅವನನ್ನು ಈಕ್ಷಿಸುತ್ತಿತ್ತು. ಆಗ ತಾನೆ ಮಿಂದು ಸಡಿಲವಾಗಿ ಜಿಗಿದ ಹೆರಳು, ಹಣೆಯಲ್ಲಿ ಗಂಧದ ತಿಲಕವಿಟ್ಟ ಮುಖಾರವಿಂದವು ಅವಳ ಸಹಜ ಸೌಂದರ್ಯವನ್ನು ಬಿಂಬಿಸುತ್ತಿತ್ತು. ಅಕ್ಕ ಬಹುಶಃ ಯಾರನ್ನಾದರೂ ಕಳುಹಿಸಿ ಅವಳನ್ನು ಬರಲು ಹೇಳಿರಬೇಕು.

ಆತ ಆಕೆಯನ್ನೊಮ್ಮೆ ನೋಡಿ ಮಂದಹಾಸ ಬೀರಿದ. ಆಕೆ ಮೃದುವಾಗಿ 'ಚಾ ತರಲಾ?' ಎಂದು ಕೇಳಿದಳು.

ಆತನ ಉತ್ತರವನ್ನು ನಿರೀಕ್ಷಿಸದೆ ಆಕೆ ಚಹಾ ತರಲು ಅಡುಗೆ ಮನೆಗೆ ಹರ್ಷದಿಂದ ಓಡಿದಳು.

ಸುಲೋಚನಾ ಚಹಾ ತಂದು ಟೀಪಾಯಿಯ ಮೇಲೆ ಇರಿಸಿದೊಡನೆ ಆತ ಎದ್ದು ಕುಳಿತ. 'ಬಂದಾಗ ತುಂಬಾ ಕತ್ತಲಾಗಿತ್ತಲ್ವ?' ಮೃದುವಾದ ಧ್ವನಿಯೊಂದು ಹೊರಟಿತು. ಅವಳ ಕಂಠದಿಂದ 'ಹೌದೆಂದು' ತಲೆ ಆಡಿಸಿದನಷ್ಟೆ ಆತ.

'ನಿನ್ನೆ ನಾನು ದೇವಾಲಯದಲ್ಲಿ ಕೈ ಮುಗಿದು ಬರುವಾಗ ಸಹ ನಿಮ್ಮನ್ನು ನೆನೆದುಕೊಂಡಿದ್ದೆ' ಸುಲೋಚನಾಳ ಮುಗ್ಧ ಕಂಠ ಅವನ ಕಿವಿಗಳನ್ನು ಸ್ಪರ್ಶಿಸಿತು. ಆತ ಚಹಾ ಹೀರತೊಡಗಿದ. ಇರಬಹುದು ಅವನು ಅವಳೊಡನೆ ಜೊತೆಯಾಗಿ ಶಾಲೆಗೆ ಹೋಗುತ್ತಿರುವಾಗ ಅದೇ ದೇವಾಲಯದ ಮೆಟ್ಟಿಲು ಹತ್ತುವಾಗಲೆಲ್ಲ ಅವಳನ್ನು ಎಷ್ಟೋ ಬಾರಿ ಛೇಡಿಸಿ ಕೂಗಿಸುತ್ತಿದ್ದ.

ಸುಲೋಚನಾಳ ಮೊದಲಿನ ಯೌವನದ ಚೆಲುವಿನ ಮೆರುಗೆಲ್ಲ ಈಗ ಮಾಸಿದಂತಿತ್ತು. ಅವನ ನೆನಪನ್ನು ಮುರಿದು ಕೇಳಿದಳು, 'ನಾನು ಮನೆಯಲ್ಲಿ ಅಮ್ಮನಿಗೆ ಹೇಳದೆ ಬಂದಿದ್ದು. ನಾನು ಮನೆಗೆ ಹೋಗ್ತೇನೆ. ಸಾಯಂಕಾಲ ಮತ್ತೆ ಬರ್ತೇನೆ' ಆತ ಏನನ್ನೂ ಹೇಳಲಿಲ್ಲ. ಆಕೆ

## ಅರ್ಥ - ಅಪಾರ್ಥ

ಮಾಜಿ **ಪ್ರಧಾನ** ದೇವೇಗೌಡ ಭವಿಷ್ಯ : ಇನ್ನೊಂದು ವರ್ಷದಲ್ಲಿ ಮತ್ತೆ ಸಾರ್ವತ್ರಿಕ ಚುನಾವಣೆ.

***– ಸಂಯುಕ್ತ ಕರ್ನಾಟಕ, 5.4.2000.***

50ಕ್ಕೂ ಹೆಚ್ಚು ಸಂಸ್ಕೃತ ಮತ್ತು ಕನ್ನಡ ವಿದ್ವಾಂಸರು ಅನುವಾದ ಯೋಜನೆಯಲ್ಲಿ ತೊಡಗುವರು. **15 ರುಪಾಯಿ** ಅಂದಾಜು ವೆಚ್ಚದ ಈ ಯೋಜನೆ ಮುಂದಿನ ನಾಲ್ಕು ವರ್ಷಗಳಲ್ಲಿ ಪೂಣ ರ್ಗೊಳ್ಳಲಿದೆ.

***–ಕನ್ನಡಪ್ರಭ, 16.5.2000***

ನೀವೂ ಇಂತಹ ಸುದ್ದಿಗಳನ್ನು ಗಮನಿಸಿದಾಗ ವಿವರಗಳೊಂದಿಗೆ ಕಳುಹಿಸಿ ಕೊಡಿ. ಸಂಪಾದಕರು, **'ಬಿಸಿಲ ಬದುಕು'**, 'ಅರ್ಥ-ಅಪಾರ್ಥ' ವಿಭಾಗ, ಅಂಚೆ ಪೆಟ್ಟಿಗೆ 7951, ಬಸವೇಶ್ವರ ನಗರ,

ಕ್ಷಣ ಪಡಿನುಡಿಗಾಗಿ ಎದುರು ಕಾದಳು. ಆದರೆ ಅವನಿಂದ ನಿಧಾನವಾದ ನೀರವಾದ ಶಬ್ದವೊಂದು ಹೊರ ಬಂತು :

'ಸುಲೋಚನಾಳನ್ನು ಒಮ್ಮೆ ನೋಡ ಬೇಕೆಂದೆನಿಸಿತ್ತು....'

ಆಕೆ ಸಂತಸದ ಹೊಳೆಯುವ ಕಣ್ಣಳನ್ನು ಹೊತ್ತು ಮತ್ತೊಮ್ಮೆ ಅವನ ವೀಕ್ಷಿಸಿ ಅಲ್ಲಿಂದ ನಿರ್ಗಮಿಸಿದಳು.

ಆತ ಸ್ನಾನ ಮುಗಿಸಿ, ಉಡುಪು ಬದಲಿಸಿ, ದೋಸೆ-ಚಹಾ ಮುಗಿಸಿ ಸೂಟ್‌ಕೇಸನ್ನು ಹಿಡಿದು ನಿಂತ. ಅಕ್ಕ ಅಡಿಗೆ ಮನೆಯಲ್ಲಿ ಮಧ್ಯಾಹ್ನದ ಊಟದ ಏರ್ಪಾಡಿನ ಸಡಗರದಲ್ಲಿದ್ದಳು. ಆತ ಸೂಟ್‌ಕೇಸನ್ನು ತೆಗೆದು ನಿಂತ ಶಬ್ದ ಕೇಳಿದೊಡನೆ ಅಕ್ಕ ಅಲ್ಲಿಗೆ ಬಂದು ಹೇಳಿದಳು, 'ಭಾವ ಬೆಳಿಗ್ಗೆ ಅಂಗಡಿಗೆ ಹೋದರು. ನೀನು ನಿದ್ರೆ ಮಾಡ್ತಿದ್ದೆ, ಆದ್ರಿಂದ ಕರೀಲಿಲ್ಲ. ಮಕ್ಕಳೆಲ್ಲಾ ಶಾಲೆಗೆ ಹೋದರು'. ಪರ್ಸಿನಿಂದ ಸ್ವಲ್ಪ ಹಣ ತೆಗೆದು ಅಕ್ಕನ ಕೈಗಿರಿಸಿ,



'ನಾನು ಹೋಗ್ತೇನೆ' ಎಂದು ಹೇಳಿದ.

ಅವನ ಮಾತನ್ನಾಲಿಸಿದ ಅಕ್ಕ ದಿಗ್ಭ್ರಾಂತಳಾಗಿ ಕೇಳಿದಳು.

'ಹೋಗ್ತೀಯಾ? ಎಲ್ಲಿಗೆ?'

ಆತನ ಬಾಯಿಂದ ಅಸ್ಪಷ್ಟವಾದ ಮಾತೊಂದು ಹೊರಟಿತು.

'ಬಂದ ದಾರಿಯಲ್ಲೇ....'

'ಅಲ್ಲ ಕಣೋ.....' ಆಕೆಯ ಕಂಠ ಬಿಗಿಯಿತು. ಅವರಿಬ್ಬರ ಕಣ್ಣುಗಳು ಒಂದು ಕ್ಷಣ ಒಂದಾದವು. ಅಕ್ಕ ಕಣ್ಣಲ್ಲಿ ನೀರು ತುಂಬಿ ಪ್ರವಾಹ ಹರಿಯತೊಡಗಿತು. ಆಕೆಯ ಮುಖದ ಮೇಲಿದ್ದ ದೃಷ್ಟಿ ಕಿತ್ತು ಹಜಾರ ಮೆಟ್ಟಿಲು ಇಳಿಯುತ್ತಾ ಹೇಳಿದ,

'ಭಾವನಿಗೆ ಹೇಳು ನಾನಿನ್ನು ಕಾಣಲಾರೆ ಅಂತ.....

ಅಕ್ಕನ ಕಂಠ ಗದ್ಗದಗೊಂಡಿತ್ತು.

'ಸುಲೋಚನ ಬಂದರೆ.....?'

'ಏನೂ ಹೇಳಬೇಡ.'

'ಸ್ವಲ್ಪ ದಿನ ಬಿಟ್ಟು ಬರ್‍ತಾನೆ ಅಂತ ಅವಳಿ ಹೇಳಲಾ?'

'ಬೇಡ'

ಗಾಳಿಯಲ್ಲಿ ತಲೆದೂಗುತ್ತಿದ್ದ ಭತ್ತದ ಪೈರಿನ ಗದ್ದೆಯ ಬದಿಯಲ್ಲಿ ಅಡಿ ಇಡುತ್ತಾ ಆತ ದಿಗಂತದಂತೆ ಕಣ್ಮರೆ ಯಾದ. ಬಾಲ್ಯ ಕಾಲದ ನೆನಪುಗಳನ್ನು ಸ್ಮರಿಸುತ್ತ ನಿಸರ್ಗ ದಲ್ಲಿ ಬೆರೆತ ಬೆಳಕಿನೊಡನೆ ಲೀನನಾದ. ಆತ ಮತ್ತೆ ಹಿಂತಿರುಗಿ ಅಕ್ಕನನ್ನು ನೋಡಲಿಲ್ಲ. ತಾನೀಗ ಹಿಂದುರುಗಿ ನೋಡಿದರೆ ಅವಳ ರೂಪ ಪ್ರಕೃತಿ ದೇವಿ ತಿಲಕವಿಟ್ಟಷ್ಟು ಕಿರಿದಾಗಿ ಕಾಣಬಹುದು. ಪಾಪ! ಅವಳನ್ನು ಅಂಗಳದಲ್ಲಿ ತನ್ನನ್ನು ನೆನೆಯುತ್ತಾ ಕಣ್ಣೀರಿಡುತ್ತಾ ನಿಂತಿರುತ್ತಾಳೆ. ಬೇಡ ಹಿಂದಿರುಗಿ ನೋಡಲಾರೆ ತನ್ನ ಅಡಿ ಮುಂದೆ ಮುಂದೆ, ಹಿಂದಕ್ಕಲ್ಲ. ಇದೊಂದು ಮುಗಿಯದ ಯಾತ್ರೆ!

# ಜೇನು ಕೀಟದ ರಾಜಾಶಾಯಿ ರಸ

ಜೇನು ಕುಟುಂಬದಲ್ಲಿ ಮೂರು ಜಾತಿಯ ಜೇನ್ನೊಣಗಳಿರುವುದು ನಮಗೆಲ್ಲಾ ತಿಳಿದ ವಿಷಯ. ಅವುಗಳೆಂದರೆ; ರಾಣಿ ಜೇನ್ನೊಣ, ಗಂಡು ನೊಣ ಮತ್ತು ಕೆಲಸಗಾರ ನೊಣಗಳು. ರಾಣಿ ನೊಣವು ಜೇನು ಕುಟುಂಬದ ತಾಯಿಯಾದರೆ, ಗಂಡು ನೊಣವು ಸೋಮಾರಿ ಕೀಟವೆಂದು ಹೆಸರುವಾಸಿಯಾಗಿದೆ. ಕುಟುಂಬದ ತ್ಯಾಗಮಯಿ ಮತ್ತು ಕರ್ಮವೀರರೆಂದು ಪ್ರಖ್ಯಾತವಾಗಿರುವ ಕೆಲಸಗಾರ ನೊಣಗಳು ಕೀಟ ಸಂಕುಲದಲ್ಲಿ ವಿಶೇಷವಾಗಿವೆ. ಈ ಕೆಲಸಗಾರ ನೊಣಗಳು ತಮ್ಮ ಜೀವಿತಾವಧಿಯಲ್ಲಿ ಬಹು ಉಪಯುಕ್ತ ರಸಾಯನಿಕ ದ್ರವವನ್ನು ಸ್ರವಿಸುವ ಮೂಲಕ ಜೇನು ಉದ್ಯಮದಲ್ಲಿ ಕ್ರಾಂತಿ ಉಂಟುಮಾಡಿವೆ. ಅದುವೆ ರಾಜಾಶಾಯಿ ರಸ.

ರಾಜಾಶಾಯಿ ರಸವೆಂದರೆ ಒಂದು ಬಗೆಯ ರಾಸಾಯನಿಕ ದ್ರವ. ಕೆಲಸಗಾರ ನೊಣಗಳು ತಮ್ಮ ದಾಡೆಗಳಲ್ಲಿರುವ ಹೈಪೋಪರಾಂಜಿಯಲ್ ಗ್ರಂಥಿಗಳಿಂದ ಈ ರಾಜಾಶಾಯಿ ರಸವನ್ನು ಉತ್ಪಾದಿಸುತ್ತವೆ. ರಾಜಾಶಾಯಿ ರಸವನ್ನು ಯುವ ಕೆಲಸಗಾರ ಜೇನ್ನೊಣಗಳು ಉತ್ಪತ್ತಿ ಮಾಡುವುದು ವಿಶೇಷವಾಗಿದೆ. ಬಿಳಿ ಬಣ್ಣಯುಕ್ತ ದ್ರವದಲ್ಲಿ ಹಳದಿ ಬಣ್ಣದ ಸಣ್ಣ-ಸಣ್ಣ ಕಣಗಳನ್ನು ಹೊಂದಿ ಹುಳಿಯಾಗಿರುವ ಈ ರಸವು ತುಂಬಾ ಶಕ್ತಿ ಭರಿಸುವ ಪೌಷ್ಠಿಕಾಂಶ ಆಹಾರವಾಗಿದೆ. ಈ ರಸವನ್ನು ಜೇನು ಹುಳಗಳು ಉತ್ಪಾದಿಸಿ, ಕಣಗಳಲ್ಲಿ ತುಂಬಿ ಕೋಶಾವಸ್ಥೆಯನ್ನು ಹೊಂದುತ್ತವೆ.

**ರಾಜಾಶಾಯಿ ರಸದಲ್ಲಿರುವ ಪ್ರಮುಖ ಪೌಷ್ಠಿಕಾಂಶಗಳು**

ಪ್ರೋಟಿನ್ ಶೇ. 17 ರಿಂದ 45, ಶರ್ಕರ್ ಶೇ. 18 ರಿಂದ 52, ಪಿಷ್ಠ ಶೇ. 3.5 ರಿಂದ 19 ಮತ್ತು ಖನಿಜಾಂಶ ಹಾಗು ಲವಣಾಂಶಗಳು ಶೇ. 2 ರಿಂದ 3 ರಷ್ಟು ಇರುವ ಬಗ್ಗೆ ತಜ್ಞರು ವರದಿ ಮಾಡಿದ್ದಾರೆ. ಈ ಎಲ್ಲಾ ಪೌಷ್ಠಿಕಾಂಶಗಳ ಜೊತೆ ನೀರಿನಾಂಶ ಶೇ. 57 ರಿಂದ 60 ರಷ್ಟು ರಾಜಾಶಾಯಿ ರಸದಲ್ಲಿರುತ್ತದೆ. ಜೀವಸತ್ವಗಳಾದ ಥೈಯಮೀನ್ ಮೈಕ್ರೊಗ್ರಾಂನಲ್ಲಿ (1 ರಿಂದ 6), ರೈಬೋಫ್ಲೇವಿನ್ (5 ರಿಂದ 25), ಪಂಟೆಥೀನಿಕ್ ಆಮ್ಲ (159ರಿಂದ265), ಫೈರಿಡೂಕ್ಸಿನ್ (1.1 ರಿಂದ 19.8) ಇರುವುದು ರಾಜಾಶಾಯಿ ರಸದ ಪೌಷ್ಠಿಕತೆಯ ಗುಣವನ್ನು ಹೆಚ್ಚಿಸಿದೆ.

ಆಗ ತಾನೆ ಉತ್ಪತ್ತಿಯಾದ ರಾಜಾಶಾಯಿ ರಸವನ್ನು ಮಾರಾಟ ಮಾಡಿ ಹಣ ಸಂಪಾದನೆ ಮಾಡಬಹುದಾಗಿದೆ. ಅತಿ ಕಡಿಮೆ ಉಷ್ಣಾಂಶದಲ್ಲಿ ರಾಜಾಶಾಯಿ ರಸವನ್ನು ಶೇಖರಿಸಿಟ್ಟು ತಂಪಾಗಿಸಿದ ಗಟ್ಟಿಗೊಂಡ ಒಣಗಿದ ರಸವನ್ನು ಸಹ ಉಪಯೋಗಿಸಬಹುದು. ವಿದೇಶಗಳಲ್ಲಿ ತಂಪಾಗಿಸಿ, ಒಣಗಿಸಿದ ರಾಜಾಶಾಯಿ ರಸ ಉತ್ಪತ್ತಿ ಮಾಡುವ ತಂತ್ರಜ್ಞಾನವನ್ನು ಕಂಡು ಹಿಡಿಯಲಾಗಿದೆ. ಸುಮಾರು 10 ಸಾವಿರ ಅಮೇರಿಕನ್ ಡಾಲರ್ ವೆಚ್ಚದಲ್ಲಿ ಈ ತಂತ್ರಜ್ಞಾನವನ್ನು ನಿರ್ಮಿಸಿ ಈ ಕೆಲಸವನ್ನು ನಿರ್ಮಿತ ಮಾನವ ಪರಿಸರದಲ್ಲಿ ಯಶಸ್ವಿಯಾಗಿ ಉತ್ಪತ್ತಿ ಮಾಡಬಹುದೆಂದು ವಿಜ್ಞಾನಿಗಳು ತೋರಿಸಿಕೊಟ್ಟಿದ್ದಾರೆ.

ಆರೋಗ್ಯಯುಕ್ತ, ಉತ್ತಮವಾಗಿ ನಿರ್ವಹಣೆ ಮಾಡಿ 5-6 ತಿಂಗಳ ಜೇನು ಗೂಡಿನಿಂದ ಸುಮಾರು 500 ಗ್ರಾಂನಷ್ಟು ರಾಜಾಶಾಯಿ ರಸವನ್ನು ಪಡೆಯ ಬಹುದಾಗಿದೆ. ವಿಶ್ವದಲ್ಲಿ ಚೀನಾ ದೇಶವು ರಾಜಾಶಾಯಿ ರಸವನ್ನು ಹೆಚ್ಚು ಉತ್ಪತ್ತಿ ಮಾಡುವ ಏಕೈಕ ದೇಶ. ವಿಶ್ವದಲ್ಲಿ ಒಟ್ಟು ಉತ್ಪತ್ತಿ ಮಾಡುವ ರಾಜಾಶಾಯಿ ರಸದಲ್ಲಿ ಶೇ. 60 ರಷ್ಟು ರಾಜಾಶಾಯಿ ರಸವನ್ನು ಚೀನಾ ದೇಶ ಒಂದರಲ್ಲೇ ಉತ್ಪತ್ತಿ ಮಾಡಲಾಗುತ್ತದೆ. ರಾಜಾಶಾಯಿ ರಸವನ್ನು ಆಹಾರದ ಜೊತೆ ಸೇವಿಸಬಹುದಾಗಿದೆ. ಇದರ ಜೊತೆಗೆ ಅಲಂಕಾರಿಕ ಪದಾರ್ಥಗಳ ತಯಾರಿಕೆಯಲ್ಲಿ ಸಹ ಉಪಯೋಗಿಸಬಹುದು. ಈ ರಾಜಾಶಾಯಿ ರಸವನ್ನು ಅತ್ಯಂತ ಪೌಷ್ಠಿದಾಯಕ ಆಹಾರವೆಂದು ಪರಿಗಣಿಸಿ ತಾರುಣ್ಯ ಕಾಪಾಡುವ ಶಕ್ತಿವರ್ಧಕ ವೆಂದು ತಜ್ಞರು ವರದಿ ಮಾಡಿದ್ದಾರೆ. ಅತ್ಯುಪಯುಕ್ತ ಆಹಾರವೆಂದು ವಿಶ್ವದಾದ್ಯಂತ ಪರಿಗಣಿಸಿರುವ ಜೇನುತುಪ್ಪವನ್ನು ನೀಡುವುದರ ಜೊತೆಗೆ ರಾಜಾಶಾಯಿ ರಸವನ್ನು ಸಹ ನೀಡುವ ಈ ಜೇನುನೊಣಗಳು ಬಹು ಉಪಯುಕ್ತತೆಗೆ ಮಾದರಿಯಾಗಿರುವುದು ಸೃಷ್ಠಿಯ ಅದ್ಭುತ ಕೊಡುಗೆ ತಾನೇ!!!

■ ಡಾ. ಬಸವರಾಜಪ್ಪ ಎಸ್.

# ತರ್ಕಬದ್ಧ



**ನಾವೇನೂ ದೇವರಲ್ಲ. ಮಾಡುವ ಪ್ರಯತ್ನ ಮಾಡುತ್ತೇವೆ. ಆದರೆ ಇದು ಖಾಸಗಿ ಆಸ್ಪತ್ರೆ - ಹಣವಿಲ್ಲದೆ ಆಗದು. ಬೇಕಾದರೆ ಪತ್ರ ಬರೆದು ಕೊಡುತ್ತೇನೆ. ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ. ಈಗ ಸದ್ಯ ಕೊಡಬಹುದಾದ ಚಿಕಿತ್ಸೆಯನ್ನು ಮಾಡುತ್ತೇನೆ. ಅನಂತರ ತಡಮಾಡದೆ ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ. ದೇವರ ಇಚ್ಛೆ ಇದ್ದಂತಾಗಲಿ.**

ಜೀವನಾನುಭವ

ಭಾವಾತಿರೇಕ ವಿವೇಕದ ಸ್ಥಾನವನ್ನು ತೆಗೆದುಕೊಳ್ಳಲಾರದು ಪೂರ್ವಾಪರದ ಪರಿಶೀಲನೆಯ ನಿರ್ಧಾರ ಸಾವಿನಂಚಿನಲ್ಲಿಯೂ ಅಗತ್ಯವೇ ಸರಿ.

ಹತ್ತು ವರ್ಷಗಳ ಮುಂಚೆ ಆದ ಘಟನೆ.

ಸುಮಾರು 10 ಗಂಟೆ ಬೆಳಿಗ್ಗೆ; ಆಗ ತಾನೇ ಆಸ್ಪತ್ರೆ ತಲುಪಿದ್ದೆ. ಹೃದ್‌ಘಾತದ ರೋಗಿಯೊಬ್ಬರನ್ನು ಹಳ್ಳಿಯಿಂದ ಕರೆತಂದಿದ್ದಾರೆ. ಜೊತೆಯಲ್ಲಿ ಇಬ್ಬರು ಹೆಣ್ಣು ಮಕ್ಕಳು; ಇಬ್ಬರು ಗಂಡಸರು, ಇವರಲ್ಲಿ ಒಬ್ಬ 15 ವರ್ಷದ ತರುಣ; ಮಗ ಇನ್ನೊಬ್ಬ ಸೋದರ ಮಾವ.

ರೋಗಿಯನ್ನು ಪರೀಕ್ಷಿಸಿದೆ. ರಕ್ತದ ಒತ್ತಡ ಕುಸಿಯುತ್ತಿತ್ತು. ತುಂಬಾ ಬೆವತು ಹೋಗಿದ್ದ ಮುಖದಲ್ಲಿ ಆಯಾಸ, ವಿವರ್ಣತೆ ವ್ಯಾಪಿಸಿದೆ, ಶರೀರದ ಅವಯವಗಳು ಶಕ್ತಿಯನ್ನು ಕಳೆದುಕೊಂಡಿದ್ದವು. ಕಣ್ಣುಗಳಲ್ಲಿ ಏನೋ ಅವಲಕ್ಷಣದ ಮಿಂಚು. ಎಲ್ಲೋ ದೃಷ್ಟಿ, ನಾಡಿಯ ಹೊಡೆತ ವೇಗವಾಗಿದೆ. ದೇಹದಲ್ಲಿ ಶೀತಲತೆ ವ್ಯಾಪಿಸುತ್ತಿದೆ. ಹೃದಯದ ಬಡಿತ ಹೆಚ್ಚಾಗಿದೆ. ಪುಪ್ಪಸಗಳು ದ್ರವದಿಂದ ಭಾರವಾಗಿವೆ.

ರೋಗಿ ಪೂರ್ಣ ಪ್ರಜ್ಞಾವಸ್ಥೆಯಲ್ಲಿ ಇಲ್ಲ. ಮಾತಾಡುತ್ತಾನೆ. ಆದರೆ ಅಸ್ಪಷ್ಟ ಮತ್ತೊಮ್ಮೆ ಮೆಲ್ಲನೆ ನರಳುತ್ತಾನೆ. ವಿದ್ಯುತ್ ಹೃದ್‌ಲೇಖನ ತೀಕ್ಷ್ಣ ಹೃದ್‌ಘಾತವನ್ನು, ಅಕಾಲಿಕ ಬಡಿತಗಳನ್ನು ಮತ್ತು ಅತಿವೇಗವನ್ನು ತೋರಿಸಿತು.

ಬಂದವರೊಲ್ಲಬ್ಬರು ಕೇಳಿದರು 'ಪರಿಸ್ಥಿತಿ ಹೇಗಿದೆ? ಹೇಳುವುದು ಕಷ್ಟ. ಹೃದ್‌ಘಾತವಾಗಿದೆ. ಭವಿಷ್ಯ ಬಹು ಗಂಭೀರವಾಗಿ ಕಾಣುತ್ತಿದೆ. ಚಿಕಿತ್ಸೆಯಂತೂ ಆಗಬೇಕು.'

ಅಷ್ಟರಲ್ಲಿ ಸಹವೈದ್ಯರ ಆಗಮನವಾಯಿತು. ಅವರಿಗೂ ಒಂದು ಪ್ರಶ್ನೆ - 'ಡಾಕ್ಟರೇ ಖರ್ಚೆಷ್ಟಾಗಬಹುದು?'

'ಖರ್ಚು ಸ್ವಲ್ಪ ಹೆಚ್ಚೆ ಬರುತ್ತದೆ.'

'ಡಾಕ್ಟರೇ, ಅಷ್ಟು ದುಡ್ಡು ಹೊಂದಿಸುವುದು ಕಷ್ಟ. ಇವನಿಗೆ 4 ಎಕರೆ ಜಮೀನು ಮಾತ್ರ ಇದೆ. ಅದನ್ನು ಮಾರಿ ಹಣ ತರಬಹುದು. ಆದರೆ ಅದರಿಂದ ಇವನು ಸರಿಹೊಂದಿ ಮತ್ತೆ ಮೊದಲಿನಂತೆ ಆಗಬಹುದೇ. ಒಂದು ವೇಳೆ ಆತ ಕೊನೆಯುಸಿರು ಎಳೆದಲ್ಲಿ ನೀರಲ್ಲಿ ಹೋಮ ಮಾಡಿದಂತಾಗುತ್ತದೆ. ಇವನನ್ನೂ ಕಳೆದುಕೊಂಡು, ಜಮೀನನ್ನೂ ಕಳೆದುಕೊಂಡು ಕುಟುಂಬ ನಿರ್ಗತಿಕವಾಗುತ್ತದೆ.'

ಇದೊಳ್ಳೆಯ ಪ್ರಶ್ನೆ - ನನಗೆ ಆಶ್ಚರ್ಯ ಮತ್ತು ಅಸಮಾಧಾನಗಳೆರಡೂ ಆದವು. ಆದರೆ ಆ ಗಂಭೀರ ಪ್ರಶ್ನೆಗೆ ನನ್ನ ಬಳಿ ಉತ್ತರವಿರಲಿಲ್ಲ. ಏಕೆಂದರೆ ಗ್ಯಾರಂಟಿ ಕೊಡುವುದು ಅಸಾಧ್ಯ.

ಹೆಂಗಸರು ಕಣ್ಣೀರಿಟ್ಟರು. ಮತ್ತೆ ನಿರ್ಧಾರ ಕೈಗೊಂಡವರಂತೆ ಮಾತನಾಡಿದರು.

'ನಾವು ರೋಗಿಯನ್ನು ಊರಿಗೇ ಕರೆದುಕೊಂಡು ಹೋಗುತ್ತೇವೆ. ವಯಸ್ಸಾದ ಈತ ಈ ರೋಗದಿಂದ ಉಳಿಯುತ್ತಾನೆಂಬ ಭರವಸೆಯೂ ಇಲ್ಲ. ದೇವರ ಇಚ್ಛೆ ಹೇಗಾದರೆ ಹಾಗಾಗಲಿ. ಭೂಮಿ ಮಾರುವುದು ಬೇಡ. ಕಡೆಗೆ ಕುಟುಂಬವಾದರೂ ಬದುಕುತ್ತದೆ.'

'ನೋಡಿ ನಿಮ್ಮ ಸೌಕರ್ಯ ಹೇಗೋ ಹಾಗೆ ಮಾಡಿ. ನಾವೇನೂ ದೇವರಲ್ಲ. ಮಾಡುವ ಪ್ರಯತ್ನ ಮಾಡುತ್ತೇವೆ. ಆದರೆ ಇದು ಖಾಸಗಿ ಆಸ್ಪತ್ರೆ - ಹಣವಿಲ್ಲದೆ ಆಗದು. ಬೇಕಾದರೆ ಪತ್ರ ಬರೆದು ಕೊಡುತ್ತೇನೆ. ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ. ಈಗ ಸದ್ಯ ಕೊಡಬಹುದಾದ ಚಿಕಿತ್ಸೆಯನ್ನು ಮಾಡುತ್ತೇನೆ. ಅನಂತರ ತಡಮಾಡದೆ ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ. ದೇವರ ಇಚ್ಛೆ ಇದ್ದಂತಾಗಲಿ.'

ಹಳ್ಳಿಗರಾದ ಅವರು ಬಡವರು, ಅಲ್ಲದೆ ಓದಿ ಬರೆದವರೂ ಅಲ್ಲ. ಆದರೆ ಅವರು ತೆಗೆದುಕೊಂಡ ನಿರ್ಧಾರ ಅವರ ಮನೆತನದ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿತ್ತು. ಅವರ ವಿಚಾರದಲ್ಲಿ ರೋಗಿಯನ್ನು ಹಿಂದಿರುಗಿ ಹಳ್ಳಿಗೇ ಕರೆದೊಯ್ಯುವುದು ನ್ಯಾಯವೇ!

ಕರ್ತವ್ಯ ಕುರುಡಾಗಿದ್ದರೂ ಕರುಳು ಕಣ್ಣೀರನ್ನು ಹರಿಸುತ್ತಿತ್ತು. ಒಂದು ಕಡೆ ದುಃಖ ಸಂಕಟ ಇನ್ನೊಂದು ಕಡೆ ಭವಿಷ್ಯದ ಯೋಚನೆ. ಈ ಸಂದಿಗ್ಧದಲ್ಲಿ ನಮ್ಮ ಕರ್ತವ್ಯವೇನೆಂಬುದನ್ನು ನಿರ್ಧರಿಸುವುದು ಕಷ್ಟದಾಯಕವೇ.

ಕಾರಣ ನಮ್ಮದು ಖಾಸಗಿ ಸಂಸ್ಥೆ. ಯಾವ ಔಷಧಿಯೇ ಆಗಲಿ, ಉಪಕರಣಗಳೇ ಆಗಲಿ ಹಣ ತರದೆ ಉಪಲಬ್ಧವಾಗುವುದಿಲ್ಲ. ಆರ್ಥಿಕವ್ಯಯದೊಂದಿಗೆ ಅನವರತ ಶ್ರಮ, ಗುರುತರ ಹೊಣೆ ಕಡೆಗೆ. ನಾವು ನಿಸ್ವಾರ್ಥ ಸೇವೆಗೂ ಸಿದ್ಧರಾಗಬಲ್ಲೆವು. ಆದರೆ ಅವರ ಕೊನೆಯಿಲ್ಲದ ಸಮಸ್ಯೆಗಳು, ಭವಿಷ್ಯದ ಭದ್ರತೆಯ ಭರವಸೆಗಳು ಇವುಗಳನ್ನು ನಿವಾರಿಸಿ ಪರಿಹಾರವನ್ನು ನೀಡುವವರಾರು?

ನಮ್ಮ ಭಾರತ ಸರ್ಕಾರ ಮುಖ್ಯವಾಗಿ ನಗರಗಳಲ್ಲೆ ಹೆಚ್ಚು ಸರ್ಕಾರಿ ಆಸ್ಪತ್ರೆಗಳನ್ನೂ ಸ್ಥಾಪಿಸಿ ಎಲ್ಲರಿಗೂ ಉಚಿತ ಸೇವೆ ಸೌಲಭ್ಯಗಳು ದೊರಕುವಂತೆ ಮಾಡಿದೆ. ಈ ಆಸ್ಪತ್ರೆಗಳಿಗೆ ತಜ್ಞ, ವೈದ್ಯರನ್ನೂ, ಅವಶ್ಯಕ ಸಲಕರಣೆಗಳನ್ನೂ ಒದಗಿಸಿದೆ. ಈಗ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ ಹೆಚ್ಚಿನ ಸೌಲಭ್ಯ ದೊರಕುತ್ತವೆ.

ಹೀಗಿರುವಾಗ ಇವರಾದರೂ ತಮಗೆ ನಿಲುಕುವ ಸೌಲಭ್ಯಗಳನ್ನು ಪಡೆಯಬಹುದಲ್ಲವೆ?

ಅದಿರಲಿ.... ನನ್ನನ್ನು ಚಕಿತನನ್ನಾಗಿ ಮಾಡಿದ್ದು.... ಅವರ ತರ್ಕಬದ್ಧ ನ್ಯಾಯ!!

■ ಡಾ. ರಾಘವೇಂದ್ರರಾವ್

# ಎಲಿಯನ್ ಎಂಬ ಹುಡುಗ

## ಎರಡು ದೇಶಗಳ ಸಮರದ ಹೊಸ ಕೇಂದ್ರ

**ಅಮೇರಿಕಾದ್ದು ಒಂದು ಕೆಟ್ಟ ಚಟ. ಹಿಂದಿನ ರಷಿಯಾ, ಈಗಿನ ಪ್ರಬಲ ಕಮ್ಯುನಿಸ್ಟ್ ದೇಶಗಳಿಂದ ಓಡಿ ಬಂದವರನ್ನು ಕೈಚಾಚಿ ಕರೆದುಕೊಳ್ಳುತ್ತದೆ. ಪ್ರಪಂಚದಲ್ಲಿ ಕಮ್ಯುನಿಸ್ಟರ್‌ಗಿಂತ ಕೆಟ್ಟವರಿಲ್ಲ, ಅಮೆರಿಕನ್ನರಿಗಿಂತ ಒಳ್ಳೆಯವರಿಲ್ಲ ಎಂದು ತೋರಿಸುವ ಹುಚ್ಚಾಟ ಇದು.**



ಆಟದಲ್ಲಿ ನಿರತ ಬಾಲಕ ಎಲಿಯನ್ (ಮಧ್ಯದಲ್ಲಿ)

'ಇದು ಹುಚ್ಚಲ್ಲ ಬೆಪ್ಪಲ್ಲ ಶೀವಲೀಲೆ' ಎಂದು ತಾರ್ಕಿಕ ವಿವರಣೆಗೆ ದಕ್ಕದ ಘಟನೆಗಳನ್ನು ಹಳ್ಳಿಗರು ಬಣ್ಣಿಸುತ್ತಾರೆ. ಅಮೇರಿಕಾದ ಫ್ಲಾರಿಡಾದ ಪುಟಾಣಿ ದ್ವೀಪ ಲಿಟಲ್ ಹವಾನಾದಲ್ಲಿ ಆರು ವರ್ಷದ ಹುಡುಗನಿಗಾಗಿ ನಡೆದಿರುವ ಕಚ್ಚಾಟ ನೋಡಿದರೆ ಇದೇ ಮಾತು ಹೇಳಬೇಕು ಎಂದು ತೋರುತ್ತದೆ.

ಆ ಹುಡುಗನ ಹೆಸರು ಎಲಿಯನ್ ಗೊನ್ಸಾಲೆಜ್. ತಾಯಿ ಇಲ್ಲ, ತಂದೆ ಮರು ಮದುವೆ ಆಗಿದ್ದಾನೆ. ಹುಟ್ಟಿದ್ದು ಕಮ್ಯುನಿಸ್ಟ್ ಕ್ಯೂಬಾದಲ್ಲಿ. ಹೊಟ್ಟೆ ಪಾಡು ಹುಡುಕಿಕೊಂಡು ಅವನ ತಾಯಿ ಕದ್ದು ಅಮೆರಿಕಾಕ್ಕೆ ಬರುತ್ತಿದ್ದಾಗ ದೋಣಿ ದುರಂತದಲ್ಲಿ ಸತ್ತು ಹೋದಳು. ಆಕೆಯ ಜೊತೆ ಇನ್ನೂ ಹದಿನೆಂಟು ಜನ ನೀರುಪಾಲಾದರು. ತಾಯಿಯ ಜೊತೆ ಇದ್ದ ಹುಡುಗ ಪವಾಡ ಎಂಬಂತೆ ಬದುಕಿಕೊಂಡ. ರಬ್ಬರ್ ಟ್ಯೂಬಿನೊಳಗೆ ಸೇರಿಕೊಂಡು ತೇಲುತ್ತಾ ಫ್ಲಾರಿಡಾದ ಕಿನಾರೆಗೆ ತೇಲಿ ಬಂದ ಅವನನ್ನು ಎತ್ತಿ ಸಂರಕ್ಷಿಸಿದ ಅಮೆರಿಕನ್ನರಿಗೆ, ಹುಡುಗನನ್ನು ಎಲ್ಲಿ ಬಿಡುವುದು ಎಂಬ ಸಮಸ್ಯೆ. ಹುಡುಗ ತಮ್ಮವನಲ್ಲ, ಕ್ಯೂಬಾದವನು. ಬೇರೆ ಸಂದರ್ಭಗಳಲ್ಲಾದರೆ ಅಂಥವರನ್ನು ಹಿಡಿದು ಮರಳಿ ತಮ್ಮ ದೇಶಕ್ಕೆ ರವಾನಿಸುತ್ತಾರೆ.

ಆದರೆ ಅಮೇರಿಕಾದ್ದು ಒಂದು ಕೆಟ್ಟ ಚಟ. ಹಿಂದಿನ ರಷಿಯಾ, ಈಗಿನ ಪ್ರಬಲ ಕಮ್ಯುನಿಸ್ಟ್ ದೇಶಗಳಿಂದ ಓಡಿ ಬಂದವರನ್ನು ಕೈಚಾಚಿ ಕರೆದುಕೊಳ್ಳುತ್ತದೆ. ಪ್ರಪಂಚದಲ್ಲಿ ಕಮ್ಯುನಿಸ್ಟರಿಗಿಂತ ಕೆಟ್ಟವರಿಲ್ಲ, ಅಮೆರಿಕನ್ನರಿಗಿಂತ ಒಳ್ಳೆಯವರಿಲ್ಲ ಎಂದು ತೋರಿಸುವ ಹುಚ್ಚಾಟ ಇದು.

ಈ ನೀತಿಯಂತೆಯೇ ಹುಡುಗನನ್ನು ತಾತ್ಕಾಲಿಕವಾಗಿ ಅಮೆರಿಕಾದಲ್ಲಿ ನೆಲೆಗೊಳಿಸಲು ನಿರ್ಧರಿಸಿದರು. ಆತನ ದೂರದ ಸಂಬಂಧಿ ದೊಡ್ಡಪ್ಪ ಎನ್ನಬಹುದಾದ ಲಾಜರೋ ಗೋನ್ಸಾಲೆಜ್ ವಶಕ್ಕೆ ಕೊಡಲು ನಿರ್ಧರಿಸಿದರು.




ಅಪಹರಣದ ವಿರುದ್ಧ ಪ್ರತಿಭಟನೆ

ಅಲ್ಲಿಂದ ಶುರುವಾಯಿತು ಕ್ಯೂಬಾ ಮತ್ತು ಅಮೇರಿಕಾಗಳ ಸಮರ.

ಅವನೋ ಆರು ವರ್ಷದ ಹುಡುಗ. ದೊಡ್ಡಪ್ಪನ ಮನೆಯಲ್ಲಿ ತಿಂದುಂಡು ಹಾಯಾಗಿ ಆಡಿಕೊಂಡಿದ್ದ. ಆದರೆ ಕ್ಯೂಬಾ ಮತ್ತು ಅಮೆರಿಕಾದ ಜನ ಹುಚ್ಚೆದ್ದು ಕುಣಿಯಲು ಆರಂಭಿಸಿದರು. ಕಾರಣ ಇಷ್ಟೇ. ಹುಡುಗನ ತಂದೆ ಜಹಾನ್ ಮಿಗ್ಯುಯೆಲ್ ಗೋನ್ಸಾಲೆಜ್ ಅಮೆರಿಕಾಕ್ಕೆ ಬಂದು ಕಾನೂನು ಸಮರ ಆರಂಭಿಸಿದ.

ಇವನು ಹುಡುಗನ ತಂದೆ ನಿಜ. ಆದರೆ ಹುಡುಗನ ತಾಯಿಯಿಂದ ವಿಚ್ಛೇದನ ಪಡೆದು, ಮರು ಮದುವೆ ಆಗಿದ್ದ. ತನ್ನ ಎರಡನೇ ಹೆಂಡತಿ, ಎರಡನೇ ಮಗು ಕಟ್ಟಿಕೊಂಡು ಬಂದ ಇವನು 'ಹುಡುಗ ತನಗೆ ಸೇರಬೇಕು' ಎಂದು ಅರ್ಜಿ ಹಾಕಿದ. ಅವನು ಆರಿಸಿಕೊಂಡ ವಕೀಲನೂ ಸಾಮಾನ್ಯ ಏನಲ್ಲ. ಅವನ ಹೆಸರು ಗ್ರಿಗೋರಿ ಬಿ. ಗ್ರೇಗ್. ಆತ ಮೊನಿಕಾ ಲೆವಿನ್‌ಸ್ಕಿ ಹಗರಣದಲ್ಲಿ ಅಮೆರಿಕಾ ಅಧ್ಯಕ್ಷ ಬಿಲ್ ಕ್ಲಿಂಟನ್ ಪರ ವಕಾಲತ್ತು ನಡೆಸಿದವನು.

ಹುಡುಗನನ್ನು ಸಾಕುತ್ತಿದ್ದ ಲಾಜರೋ ಸಾಮಾನ್ಯ ಏನಲ್ಲ. ಕ್ಯೂಬಾದಿಂದ ವಲಸೆ ಬಂದು ಅಮೆರಿಕಾದಲ್ಲಿ ನೆಲೆಸಿದ ಫ್ಲಾರಿಡಾದ ಮಿಯಾಮಿ ಭಾಗದಲ್ಲಿ ಅವನದು ಹೆಸರಾಂತ ಕುಟುಂಬ. ಅವರ ಹಾಗೆ ವಲಸೆ ಬಂದು ನೆಲೆಸಿದ ಕ್ಯೂಬನರೇ ಹೆಚ್ಚಿರುವ ಲಿಟಲ್ ಹವಾನಾ ದ್ವೀಪದಲ್ಲಿ ಆತನ ಕುಟುಂಬಕ್ಕೆ ಹೆಚ್ಚಿನ ರಾಜಕೀಯ ಮಾನ್ಯತೆ. ವಲಸೆ ಬಂದ ಕ್ಯೂಬನರ ಪರ ಅವರೇನು ಮಾತಾಡಿದರು ಅದಕ್ಕೆ ಅಮೆರಿಕಾದಲ್ಲಿ ಭಾರೀ ಬೆಲೆ. ಹೀಗಾಗಿ ಲಾಜರೋಗೆ ಇದೊಂದು ಪ್ರತಿಷ್ಠೆಯ ಪ್ರಶ್ನೆ ಆಯಿತು.

ಇದಕ್ಕೆ ತಕ್ಕ ಹಾಗೆ ಅಮೆರಿಕನ್ನರು, ಕ್ಯೂಬಾದವರು ಬೀದಿಗಿಳಿದು ಕುಣಿಯತೊಡಗಿದರು. ಹುಡುಗ ಫ್ಲಾರಿಡಾದ ಕಿನಾರೆಗೆ ತೇಲಿಬಂದದ್ದು ಕಳೆದ ನವೆಂಬರ್ 25ರಂದು. ಅಂದು ಅಮೆರಿಕಾ

ಭದ್ರತಾ ಪಡೆಗಳಿಂದ ಬಲವಂತ ಅಪಹರಣ

ದಲ್ಲಿ ಸಂಭ್ರಮದ 'ಥ್ಯಾಂಕ್ಸ್ ಗಿವಿಂಗ್ ಡೇ'. ಹುಡುಗನನ್ನು ಇಲ್ಲೇ ಇರಿಸಿಕೊಳ್ಳಬೇಕು ಎಂಬ ಹಟಕ್ಕೆ ಇದೂ ಒಂದು ಕಾರಣ.

ಆರರ ಹುಡುಗ ಎಲಿಯನ್ ನಿತ್ಯ ಮುಖಪುಟದ ಸುದ್ದಿಯಾದ. ಅವನು ಬಳಸಿ ಬಿಸಾಕಿದ ಬಟ್ಟೆ ಆಚೆಗೆ, ಇಂಟರ್‌ನೆಟ್ ಮೂಲಕ ಹರಾಜಾಯಿತು. ಮೊನಿಕಾ ಲೆವನ್‌ಸ್ಕಿ ಪ್ರಕರಣದ ಮೋಜಿನ ನಂತರ, ಈ ಹುಡುಗ ಅಮೆರಿಕನ್ನರ ಕುತೂಹಲದ, ಮನರಂಜನೆಯ ಕೇಂದ್ರವಾದಂತಿದ್ದ.

ಇದೆಲ್ಲಕ್ಕೆ ಕೊನೆ ಹಾಡುವಂತೆ ಏಪ್ರಿಲ್ 22ರಂದು ನ್ಯಾಯಾಲಯ ಆದೇಶ ಹೊರಡಿಸಿತು. ಹುಡುಗನನ್ನು ತಂದೆಯ ವಶಕ್ಕೆ ಒಪ್ಪಿಸಬೇಕು, ಆದರೆ ಆತ ಮತ್ತವನ ತಂದೆ, ಮಲತಾಯಿ ಯಾರೂ ಅಮೆರಿಕಾದಿಂದ ತೆರಳುವಂತಿಲ್ಲ. ಅಂತಿಮ ನಿರ್ಣಯ ಆಗಬೇಕು. ಆಮೇಲೆ ಮುಂದಿನ ವಿಚಾರ ಎಂದಿತು ನ್ಯಾಯಾಲಯ.

ಇದಕ್ಕೆ ಲಾಜರೋ ಒಪ್ಪಲಿಲ್ಲ. ಮರುದಿನದ ನಸುಕಿನ ವೇಳೆಗೆ ಭದ್ರತಾ ಪಡೆಗಳವರು



ಲಾಜರೋ ಜೊತೆ ಎಲಿಯನ್

ಲಾಜರೋನ ಮನೆಗೆ ನುಗ್ಗಿ, ಬಲಪ್ರಯೋಗದಿಂದ ಹುಡುಗನನ್ನು ಎತ್ತಿ ತಂದು ತಂದೆಯ ವಶಕ್ಕೆ ಕೊಟ್ಟರು.

ನ್ಯಾಯಾಲಯದ ನಿರ್ಣಯವೇನೊ ಸರಿ. ಆದರೆ ಬಲ ಪ್ರಯೋಗಿಸಿ ಮಗುವನ್ನು ಕಿತ್ತುಕೊಂಡು ಬಂದದ್ದು ಸರಿಯಲ್ಲ ಎಂದು ಜನ ಹೊಸ ತಕರಾರು ತೆಗೆದಿದ್ದಾರೆ. ಈ ವಿಚಾರ ನೀವು ಓದುವ ಹೊತ್ತಿಗೆ ಪ್ರಕರಣದ ಅಂತಿಮ ತೀರ್ಪು ಹೊರಬಿದ್ದಿರುತ್ತದೆ.

ಇಲ್ಲಿ ಗಮನಿಸಬೇಕಾದ ಒಂದು ಸಣ್ಣ ಸಂಗತಿ ಎಂದರೆ, ಈ ಸಣ್ಣ ಹುಡುಗ ಎರಡೂ ದೇಶಗಳ ಜನರ ಹುಚ್ಚಾಟಕ್ಕೆ, ಅರಚಾಟಕ್ಕೆ ಕಾರಣವಾದ. ಕ್ಯೂಬಾದ ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೋ, ಅಮೆರಿಕಾದ ಅಧ್ಯಕ್ಷ ಬಿಲ್ ಕ್ಲಿಂಟನ್ ಖುದ್ದಾಗಿ ಹುಡುಗನ ಬಗ್ಗೆ ಹೇಳಿಕೆ ನೀಡಿದರು. ಪ್ರತಿ ಹೆಜ್ಜೆಯಲ್ಲೂ ತಮ್ಮ ದೇಶದ್ದೇ ಸರಿ, ವಿಜಯ ಎಂದು ಬೊಬ್ಬೆ ಇಟ್ಟರು. ಈಗ ಅದಕ್ಕೆಲ್ಲ ತಾತ್ಕಾಲಿಕ ವಿರಾಮ ಒದಗಿದೆ.

■ ಶ್ರೀಕಾಂತ

ಟಾಲ್‌ಸ್ಟಾಯ್ ಹೇಳಿದ

# ಮಕ್ಕಳ ಕತೆಗಳು

ಅನುವಾದ : ಚಂದ್ರಾ ನಾಗಭೂಷಣಸ್ವಾಮಿ



ಟಾಲ್‌ಸ್ಟಾಯ್ ರಶಿಯಾ ದೇಶದ ಲೇಖಕ, ಜಗತ್ತಿನ ಅತ್ಯುತ್ತಮ ಸಾಹಿತಿಗಳಲ್ಲಿ ಒಬ್ಬನು ಎಂದು ಪ್ರಸಿದ್ಧನಾಗಿದ್ದಾನೆ. ಆತ ತನ್ನ ರೈತರ ಮಕ್ಕಳಿಗೆಂದು ಕೆಲವು ಮಕ್ಕಳ ಕಥೆಗಳನ್ನು ಬರೆದಿದ್ದಾನೆ. ಬಹಳ ಹಿಂದಿನ ಕಾಲದಲ್ಲಿ ಈಸೋಪ್ ಎಂಬಾತ ಹೇಳಿದ ಕಥೆಗಳನ್ನು ಟಾಲ್‌ಸ್ಟಾಯ್ ಹೊಸ ರೀತಿಯಲ್ಲಿ ಹೇಳಿದ್ದಾನೆ. ಕಥೆಯ ಅರ್ಥ ಏನು, ನೀತಿ ಏನು ಎಂದು ಟಾಲ್‌ಸ್ಟಾಯ್ ಬಿಡಿಸಿ ಹೇಳುವುದಿಲ್ಲ. ಮಕ್ಕಳು ಜಾಣರು, ಕಥೆ ಅವರಿಗೆ ತಿಳಿಯುತ್ತದೆ ಎಂದು ಹೇಳುತ್ತಿದ್ದ. ಅವನು ಹೇಳಿದ ಕಥೆಗಳಲ್ಲಿ ಕೆಲವನ್ನು ಇಲ್ಲಿ ಪ್ರತಿ ತಿಂಗಳು ನೀಡುತ್ತೇವೆ. ನಿಮಗೂ ಇಷ್ಟ ಆದರೆ ಬೇರೆ ಮಕ್ಕಳಿಗೂ ಹೇಳಿ.

## ಅಳಿಲು ಮತ್ತು ತೋಳ



ಒಮ್ಮೆ ಒಂದು ಅಳಿಲು ಕೊಂಬೆಯಿಂದ ಕೊಂಬೆಗೆ ಜಿಗಿದು ಆಟ ಆಡುತ್ತಿತ್ತು. ಆಗ ಆಯ ತಪ್ಪಿ ಕೆಳಕ್ಕೆ ಬಿದ್ದು ಬಿಟ್ಟಿತು. ಅದು ಸೀದಾ ಮರದ ಕೆಳಗೆ ಮಲಗಿದ್ದ ತೋಳದ ಮೇಲೆ ಬಿತ್ತು. ತೋಳ ತಟ್ಟನೆ ಎದ್ದಿತು. ಅದಕ್ಕೆ ಬಹಳ ಸಿಟ್ಟು ಬಂದಿತ್ತು. ಅದು ಅಳಿಲನ್ನು ಹಿಡಿದು ತಿನ್ನಲು ಸಿದ್ಧವಾಯಿತು.

ಆಗ ಅಳಿಲು ''ಅಯ್ಯಾ ತೋಳ, ದಯವಿಟ್ಟು ನನ್ನನ್ನು ಬಿಟ್ಟುಬಿಡು'' ಎಂದು ಬೇಡಿಕೊಂಡಿತು.

''ಆಯಿತು. ನಿನ್ನನ್ನು ಬಿಡುತ್ತೇನೆ. ನೀನು ನನ್ನ ಪ್ರಶ್ನೆಗೆ ಮೊದಲು ಉತ್ತರ ಹೇಳು'' ಅಂದಿತು ತೋಳ.

ಅಳಿಲು ''ಏನದು ಪ್ರಶ್ನೆ'' ಎಂದಿತು.

''ನೀವು ಅಳಿಲುಗಳು ಯಾವಾಗಲೂ ಸಂತೋಷವಾಗಿರುತ್ತೀರಿ. ನಾ ತೋಳಗಳು ಯಾವಾಗಲೂ ದುಃಖ ಪಡುತ್ತಿರುತ್ತೇವೆ. ನೀವು ಯಾವಾಗಲ ಆಟ ಆಡುತ್ತಿರುತ್ತೀರಿ. ನಾವು ತೋಳಗಳು ದಿನವಿಡೀ ಸುಮ್ಮನೆ ಕಾಯುತ ಮಲಗಿರುತ್ತೇವೆ. ಯಾಕೆ ಹೇಳು'' ಅಂದಿತು ತೋಳ.

ಆಗ ಅಳಿಲು ''ಅಯ್ಯಾ ತೋಳ, ನನ್ನನ್ನು ಹೋಗಲು ಬಿಡು, ನನಗೆ ನಿನ್ನ ಕಂಡರೆ ಭಯ. ನಾನು ಮರ ಹತ್ತಿ ಕುಳಿತು ಅಲ್ಲಿಂದಲೇ ನಿನ್ನ ಪ್ರಶ್ನೆಗೆ ಉತ್ತ ಹೇಳುತ್ತೇನೆ'' ಅಂದಿತು.

ತೋಳ ಅಳಿಲನ್ನು ಬಿಟ್ಟಿತು. ಅಳಿಲು ಓಡಿ ಮರ ಹತ್ತಿ ಕುಳಿತು- ''ನಾ ಅಳಿಲುಗಳು ಯಾವಾಗಲೂ ಸಂತೋಷದಿಂದ ಚಟುವಟಿಕೆಯಿಂದ ಇರುತ್ತೇವ ಯಾಕೆಂದರೆ ನಮ್ಮ ಮನಸ್ಸಿನಲ್ಲಿ ಕೆಟ್ಟ ಯೋಚನೆ ಇಲ್ಲ. ನಾವು ಯಾರಿಗ ಅಪಾಯ ಮಾಡುವುದಿಲ್ಲ'' ಎಂದು ಹೇಳಿತು.

## ಹದ್ದು, ಕಾಗೆ ಮತ್ತು ಕುರುಬ



ಒಂದು ಮೈದಾನದಲ್ಲಿ ಕುರಿಗಳು ಮೇಯುತ್ತಿದ್ದವು. ಆಗ ಒಂದು ಹದ್ದು ಮೇಲಿನಿಂದ ಎರಗಿ ಒಂದು ಪುಟ್ಟ ಕುರಿ ಮರಿಯನ್ನು ಹಿಡಿದುಕೊಂಡು ಹಾರಿ ಹೋಯಿತು.

ಅಲ್ಲೇ ಮರದ ಮೇಲೆ ಕೂತಿದ್ದ ಕಾಗೆ ಇದನ್ನು ನೋಡಿತು. ಅದಕ್ಕೂ ಮಾಂಸ ತಿನ್ನಬೇಕೆಂದು ಆಸೆಯಾಗಿತ್ತು. ''ಹದ್ದಿನ ಹಾಗೆಯೇ ನಾನೂ ಒಂದು ಕುರಿ ಮರಿ ಎಗರಿಸುತ್ತೇನೆ. ಅದೇನು ಬಹಳ ಸುಲಭದ ಕೆಲಸ. ಆ ಹದ್ದಿಗೆ ಬುದ್ಧಿ ಇಲ್ಲ. ಪುಟ್ಟ ಮರಿಯನ್ನು ತೆಗೆದುಕೊಂಡು ಹೋಯಿತು. ನಾನು ದೊಡ್ಡ ಕುರಿಯನ್ನೇ ತರುತ್ತೇನೆ'' ಅಂದುಕೊಂಡಿತು.

ಸರಿ. ಕಾಗೆ ಒಂದು ದೊಡ್ಡ ಕುರಿಯನ್ನು ಆರಿಸಿಕೊಂಡಿತು. ಹಾರಿ ಹೋಗಿ ಅದರ ಮೇಲೆ ಕೂತಿತು. ತನ್ನ ಕಾಲಿನ ಉಗುರುಗಳನ್ನು ಕುರಿಯ ಮೈಮೇಲೆ ಊರಿತು. ಆಗ ಅದರ ಕಾಲು ಕುರಿಯ ಉಣ್ಣೆಯಲ್ಲಿ ಸಿಕ್ಕಿಕೊಂಡಿತು. ಏನು ಮಾಡಿದರೂ ಕಾಲು ಬಿಡಿಸಿಕೊಳ್ಳಲು ಆಗಲಿಲ್ಲ. ಜೋರಾಗಿ ಕೂಗಿಕೊಂಡಿತು. ಕಾಗೆಯ ಕೂಗಾಟ ಕೇಳಿ ಕುರುಬ ಬಂದ. ಕಾಗೆಯನ್ನು ಹೊಡೆದು ಸಾಯಿಸಿ ಬಿಸಾಕಿದ.

# ಕೊನೆಗೂ ನ್ಯಾಯ ಸಿಕ್ಕಿತು

ನಮ್ಮಲ್ಲಿ ಪತ್ರಿಕೋದ್ಯಮದ ಪರಿಕಲ್ಪನೆಯೇ ಬದಲಾಗುತ್ತಿದೆ. ಆಧುನಿಕ ತಂತ್ರಜ್ಞಾನ, ಅನಗತ್ಯ ಉತ್ಸಾಹಗಳು, ದುಷ್ಟ ಜನರ ಪಾಲ್ಗೊಳ್ಳುವಿಕೆಯೂ ಸೇರಿ ಕನ್ನಡದಲ್ಲಿ ಪತ್ರಿಕೆಗಳ ಸಂಖ್ಯೆ ತೀರಾ ಹೆಚ್ಚಿದೆ. ತೇಜೋವಧೆ, ಬೆದರಿಸಿ ಹಣ ಮಾಡುವುದೇ ಈಗ 'ಪತ್ರಿಕೋದ್ಯಮ' ದಂಥೆ ಆಗಿದೆ. ಇನ್ನು ಕೆಲವು ಪತ್ರಿಕೆಗಳು ಅರ್ಥ ಹೀನ ವಿಚಾರಗಳನ್ನು ಬೆರಗುಗೊಳಿಸುವ ರೀತಿಯಲ್ಲಿ ಮುದ್ರಿಸುತ್ತಾ ಜಾಹೀರಾತು ಉದ್ಯಮದ ಜೊತೆ ಅಕ್ರಮವಾಗಿ ಕೈ ಜೋಡಿಸಿ ಕಾಸು ಮಾಡುತ್ತಿವೆ. ಇಂಥ ಪರಿಸ್ಥಿತಿಯಲ್ಲಿ ಸಾಮಾಜಿಕ ಬದ್ಧತೆ ಮತ್ತು ಪತ್ರಿಕೋದ್ಯಮದ ಧರ್ಮಕ್ಕೆ ಅಂಟಿಕೊಂಡೇ ಒಂದು ಪತ್ರಿಕೆ ನಡೆಸುವುದು ಅಸಾಧ್ಯ, ಅಷ್ಟೇ ಅಲ್ಲ ಅಪಾಯಕಾರಿ ಎಂಬಂಥ ಪರಿಸ್ಥಿತಿ ಈಗ ತಲೆ ದೋರಿದೆ. ಅದರಲ್ಲೂ ಜಿಲ್ಲಾ ಕೇಂದ್ರ, ಅಥವಾ ಸಣ್ಣ ಊರುಗಳಲ್ಲಿ ಸತ್ಯ ಹೇಳುವ ಪತ್ರಿಕೆಗಳು ಬದುಕುವುದೇ ಕಷ್ಟ ಎಂಬಂಥ ಸ್ಥಿತಿ. ಪ್ರಾಮಾಣಿಕತೆ ಮತ್ತು ಪತ್ರಿಕಾ ಧರ್ಮದ ಬದ್ಧತೆಗಳೇ ವಿರಳವಾಗುತ್ತಿವೆ ಎಂಬುದು ನಿಜ. ಹಾಗೆಂದು ನಿಜವಾದ ಪತ್ರಿಕಾ ಧರ್ಮದಲ್ಲಿ ನಂಬಿಕೆ ಇಟ್ಟು ಬದುಕುವವರೇ ಇಲ್ಲ ಎಂದಲ್ಲ. ಅಂಥವರದು ಅಪಾಯಕಾರಿ ಬದುಕು.



The Democrat-Reporter 50¢

# Deputy plants dope

ಅಮೇರಿಕಾದಂಥ ಮುಕ್ತ, ಅಭಿವ್ಯಕ್ತಿ ಸ್ವಾತಂತ್ರ್ಯದ ಅತ್ಯುತ್ಕೃಷ್ಟ ಮಾದರಿ ಎನ್ನಬಹುದಾದ ದೇಶದಲ್ಲಿಯೂ ಪರಿಸ್ಥಿತಿ ಭಿನ್ನ ಏನಲ್ಲ. ಅದನ್ನು ಬಿಂಬಿಸುವ ಸತ್ಯ ಘಟನೆಗಳನ್ನು ಇಲ್ಲಿ ಕೊಡಲಾಗಿದೆ.

ಅಮೇರಿಕಾದ ಸಣ್ಣ ನಗರ ಒಂದರಲ್ಲಿ ಭ್ರಷ್ಟಾಚಾರ ಬಯಲುಗೊಳಿಸುವುದು, ಅದರಲ್ಲೂ ಈ ಭ್ರಷ್ಟಾಚಾರದ ಕೇಂದ್ರ ಸ್ಥಳೀಯ ಮುಖಂಡನೇ ಆಗಿರುವಾಗ ತೀರಾ ಅಪಾಯಕಾರಿ ಆಗಬಲ್ಲದು. ಅಲ್ಲಿನ ಪತ್ರಿಕಾ ಸಂಪಾದಕ ಮತ್ತು ಆತನ ಪತ್ನಿ ಇದನ್ನು ಅರಿತಿದ್ದು ನಂಬಲೂ ಸಾಧ್ಯವಿಲ್ಲದ ರೀತಿಯಲ್ಲಿ. ಸ್ನೇಹಿತರು,ನೆರೆಯವರು ಕೈಬಿಟ್ಟು ದೂರ ಸರಿದರು. ನಿತ್ಯ ಎಂಬಂತೆ ಜೀವ ಬೆದರಿಕೆ. ಕಾನೂನು ಜಾರಿ ಮಾಡಬೇಕಾದ ಅಂಗವೇ ಇಲ್ಲವಾಗಿದೆಯೇನೋ! ಎಂಬ ಅನುಮಾನ ಮೂಡಬಹುದಾದ ಸ್ಥಿತಿ. ಆದರೂ ಗುಡ್‌ಲೋ ಮತ್ತು ಜೀನ್ ಸಟ್ಟನ್ ಅಸಹಾಯಕರಾಗಿ ಕೈ ಚೆಲ್ಲಲಿಲ್ಲ. ಇವತ್ತಲ್ಲ ನಾಳೆ ತಮಗೆ ಗೆಲವು ದೊರೆಯುತ್ತದೆ ಎಂದು ಅವರು ನಂಬಿದ್ದರು. ಆದರೆ, ಅಂಥ ದಿನ ಕಾಣಲು ಅವರ ಕುಟುಂಬ ಬದುಕಿ ಉಳಿದಿರುತ್ತದೆಯೇ? ಎಂಬುದಾಗಿತ್ತು.

ಪೊಲೀಸು ದಿರಿಸಿನಲ್ಲಿದ್ದ ಆರಡಿಯ ಒಂಟಿ ತರುಣನ ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಜೀನ್ ಸಟ್ಟನ್‌ಗೆ ಸಿಟ್ಟು, ಗೊಂದಲ. ಚಿಕ್ಕ ಹುಡುಗ ಆಗಿದ್ದಾಗಿಂದ ಆತನನ್ನು ಜೀನ್ ನೋಡಿದ್ದಳು. ಅವತ್ತಿನ ಮಂದಹಾಸಕ್ಕೂ, ಇವತ್ತಿನ ಗೇಲಿಯ ಉಪಹಾಸಕ್ಕೂ ಭಾರೀ ಅಂತರವಿತ್ತು. ಅವನ ನೀಲಿ ಕಣ್ಣುಗಳಲ್ಲಿ ಅವತ್ತು ಏನೋ ವ್ಯತ್ಯಾಸ.



ಗುಡ್‌ಲೋ

'ನಿಮಗೆ ಗೊತ್ತಾ ಜೀನ್!' ಸನ್ನಿ ಬ್ರೆಕೆನ್ ಬ್ರಿಜ್ ಅವತ್ತು ನಿರಾಗಸ ದನಿಯಲ್ಲಿ ಹೇಳುತ್ತಾ ಹೋಗಿದ್ದನ್ನು ಆಕೆ ಇಂದೂ ನೆನಪು ಮಾಡಿಕೊಂಡು ಹೇಳುತ್ತಾರೆ 'ಶರೀಫ್ ಬಗ್ಗೆ ನೀವು ಅದೇನೋ ನಿಮ್ಮ ಪೇಪರಲ್ಲಿ ಬರೆದುಕೊಳ್ಳುತ್ತಾ ಇದ್ದೀರಲ್ಲ! ಅದು ನಿಲ್ಲದೆ ಹೋದರೆ, ಒಂದಲ್ಲ ಒಂದು ದಿನ ಬೆಳಿಗ್ಗೆ ನಿಮಗೆ ಎಚ್ಚರಾಗಿ ಕಣ್ಣು ಬಿಟ್ಟರೆ ನಿಮ್ಮ ಮನೆಯ ಸುತ್ತ ಪೊಲೀಸರು ನಿಂತಿರುತ್ತಾರೆ.'

ಅಷ್ಟು ಹೇಳಿದ ಮೇಲೂ ತನ್ನ ರಾಕ್ಷಸ ನಗೆಯನ್ನು ನಿಲ್ಲಿಸದ ಆತನ ಮುಖದಲ್ಲಿ ನಗೆ ಎನ್ನುವುದು ಅತ್ಯಂತ ಕ್ರೂರ ವ್ಯಂಗ್ಯದಂತೆ ಕಾಣಿಸಿತು. 'ನಿಮಗೂ ಗೊತ್ತಿರಬೇಕು. ನಿಮ್ಮ ಮನೇಲಿ ಏನು ಸಿಗುತ್ತದೆ ಅಂತ. ಹಾಗೇ ಅದು ನಿಮ್ಮ ಆಫೀಸಿನಲ್ಲೂ ಆಗಬಹುದು.' ಅಷ್ಟು ಹೇಳಿದ ಮೇಲೂ ಆತನ ಮುಖದ ಮೇಲೆ ಅಚ್ಚೊತ್ತಿದಂತೆ ಕಂಡ ನಗೆಯಿಂದಲೇ ಮುಂದೆ ಏನೆಲ್ಲ ಆಗಬಹುದೆಂಬುದು ಜೀನ್‌ಗೆ ಹೊಳೆದುಬಿಟ್ಟಿತು. ಇದನ್ನು ಆಕೆ ಮುಂಚೆಯೂ ಊಹಿಸಿದ್ದಳು. ಬ್ರೆಕನ್‌ಬ್ರಿಜ್ ಹೇಳಿದ ಮಾತಿಂದ, ತಾ[illegible] ಅಂದುಕೊಂಡಿದ್ದೆಲ್ಲ ನಿಜವಾಗುತ್ತದೆ ಎಂಬು[illegible] ಖಚಿತವಾಗಿಬಿಟ್ಟಿತು.

ಇದು ತಮ್ಮ ಮನೆ, ಆಫೀಸಲ್ಲಿ ಡ್ರಗ್‌ಗಳನ್ನು ಅವಿಸಿ[illegible] ಪೇಚಿಗೆ ಸಿಕ್ಕಿಸುವ ಮುನ್ಸೂಚನೆ ಎಂಬುದು ಆಕೆಗೆ ತಿಳಿದುಬಿಟ್ಟಿ[illegible] ಈ ಬಗ್ಗೆ ಗಂಡ ಹೆಂಡತಿ ಸಾಕಷ್ಟು ಸಲ ಮಾತಾಡಿಕೊಂಡಿದ್ದ[illegible] ಒಮ್ಮೆ ಡ್ರಗ್ ಪತ್ತೆ ಆಯಿತೆಂದರೆ, ಆ ಮನೆ ಅಥವಾ ಆಫೀ[illegible] ಮಾಲೀಕರ ಆಸ್ತಿಯಲ್ಲಿ ಮುಟ್ಟುಗೋಲಾಗುತ್ತದೆ ಎಂಬುದು ಆಕೆಗೆ ಗೊತ್ತಿತ್ತು.

ಬ್ರೆಕನ್ ಬ್ರಿಜ್ ತಮಾಷೆ ಮಾಡುತ್ತಿಲ್ಲ, ಶರೀಫ್‌ನ ಕೈಕೆ[illegible] ಮಾದಕ ದ್ರವ್ಯ ನಿಯಂತ್ರಣ ದಳದ ಮುಖ್ಯಸ್ಥ ಆಗಿರುವ ಆತನಿ[illegible] ವಶಪಡಿಸಿಕೊಂಡಿರುವ ಡ್ರಗ್‌ಗಳನ್ನೇ ತಂದು ತಮ್ಮಲ್ಲಿ ಅವಿಸಿಡುವುದು ಸುಲಭ ಎಂಬುದೂ ಗೊತ್ತಿತ್ತು. ಇದಕ್ಕಿಂತ ಹೆಚ್ಚಾಗಿ ಬ್ರೆಕನ್ ಬ್ರಿಜ್‌ನ ಬೆದರಿ[illegible] ನಿಜಕ್ಕೂ ಆತನ ಬಾಸ್, ಶರೀಫ್ ಆಗಿರುವ ರೇಜರ್ ಡೇವಿಸ್ ತಿಳಿಸಿರು[illegible] ಕೊನೆಯ ಸಂದೇಶ ಎಂಬುದೂ ಮನದಟ್ಟಾಗಿ ಹೋಯಿತು.

ಈ ಮಾತುಕತೆ ನಡೆದಿದ್ದು ಅಮೇರಿಕಾದ ಅಲಬಾಮಾ ಪ್ರಾಂತ್ಯದ ಲಿಂಡೆನ್[illegible] ಎಂಬ ಸಣ್ಣ ಊರೊಂದರ ಭಾಗವಾದ ಮ್ಯಾರೆಂಜೋ ಕೌಂಟಿಯ ನ್ಯಾಯಾಲಯದ ಮುಂಭಾಗದಲ್ಲಿ. ಆಗ ಮಧ್ಯಾಹ್ನ. ಆಗಷ್ಟೇ ನ್ಯಾಯಾಲಯದ ಸುತ್ತು ಮುಗಿಸಿ ಜೀನ್ ಹೊರಟಾಗ ಬ್ರೆಕೆನ್ ಬ್ರಿಜ್ ಕರೆದಿದ್ದ ಜೀನ್ ಮತ್ತು ಆಕೆಯ ಗಂಡ ಗುಡ್‌ಲೋ ಪ್ರಕಟಿಸುತ್ತಿದ್ದ 'ಡೆಮೋಕ್ರ್ಯಾಟ್ ರಿಪೋರ್ಟರ್' ಪತ್ರಿಕೆಗಾಗಿ ಅಂದಿನ ಮುಂಜಾನೆಯ ಸುದ್ದಿ ಬರೆದು ಕೊಡುವುದಿತ್ತು. ಹಾಗಾ[illegible] ಆಕೆ ಅವಸರದಲ್ಲಿ ಇದ್ದುದು ನಿಜ. ಆ ಹೊತ್ತಲ್ಲಿ ಬ್ರೆಕನ್‌ಬ್ರಿಜ್ ತಡೆದು ನಿಲ್ಲಿ[illegible] ಇಂಥ ಮಾತಾಡಿದಾಗ ಸಹಜವಾಗಿಯೇ ರೇಗಿತು.

''ನಮ್ಮ ಮನೇಲಿ ಡ್ರಗ್ ಪತ್ತೆ ಆಗಬೇಕಾದರೆ ನೀನೇ ತಂದು ಇಡಬೇಕು ಅಷ್ಟೇ. ಹಾಗೇನಾದರೂ ನೀನು ತಂದಿಡೋ ಪ್ರಯತ್ನ ಮಾಡಿದೆ ಅಂದ[illegible] ಬಂದೂಕಿನ ನಳಿಕೆಗಳು ನಿನ್ನ ಕಾಯ್ತಾ ಇರುತ್ತವೆ.'' ಎಂದವಳೇ ಸರಸರನೆ ನಡೆದು ಹೋಗಿಬಿಟ್ಟಳು. ಬೆನ್ನ ಹಿಂದೆ ಅವನ ನಗು ಕೇಳಿಸಿತು. ಆದರೆ ಅದು ಅಟ್ಟಹಾಸದ ನಗೆ ಆಗಿರಲಿಲ್ಲ. ಅವನಿಗೂ[illegible] ಭಯ ಆದದ್ದು ಮುಚ್ಚಿಟ್ಟುಕೊಳ್ಳಲು ಮಾಡಿದ ಯತ್ನದಂತಿತ್ತು ಆ ನಗು. ಸಿಟ್ಟಿಂದ ಕುದಿಯುತ್ತಲೇ ರಸ್ತೆ ದಾಟಿದ ಜೀನ್, ಡೆಮೋಕ್ರೇಟ್ ರಿಪೋರ್ಟರ್ ಕಚೇರಿ ತಲುಪಿ, ಗಂಡ ಗುಡ್‌ಲೋಗೆ ನಡೆದ ಸಂಗತಿ ಹೇಳಿದಳು. ''ಡೇನಿಸ್‌ನ ಭ್ರಷ್ಟಾಚಾರ ಬಯಲುಗೊಳಿಸಿದ ಮೊದಲ ವರದಿ ನಮ್ಮಲ್ಲಿ ಪ್ರಕಟವಾದ ದಿನದಿಂದಲೇ ಇಂಥದ್ದು ಏನಾದರೂ ಆಗುವುದೆಂದು ನಿರೀಕ್ಷಿಸಿಯೇ ಇದ್ದೆ'' ಎಂದ ಗುಡ್‌ಲೋ.

## ಶರೀಫ್ ವಿರುದ್ಧ ಆಂದೋಲನ

ರೋಜರ್ ಡೇನಿಸ್ ಇಪ್ಪತ್ತಾರು ವರ್ಷಕ್ಕೂ ಹೆಚ್ಚು ಕಾಲ ಪೊಲೀಸ್ ಇಲಾಖೆಯಲ್ಲಿ ಇದ್ದವನು. ಆರೆ ಅಡಿ ಮೂರು ಅಂಗುಲ ಎತ್ತರ ದೈತ್ಯ ಬಹಳಷ್ಟು ಸಮಯ ಡ್ರೈವಿಂಗ್ ಲೈಸೆನ್ಸ್ ಅಧಿಕಾರಿಯಾಗಿ ಮರೆಂಗೋ ಕೌಂಟಿಯಲ್ಲೇ ದುಡಿದಿದ್ದ. ಅದು ಮುಗಿದ ಕಳೆದು ಹೋದ ಡ್ರೈವಿಂಗ್ ಲೈಸೆನ್ಸ್‌ಗಳಿಗೆ ಸಂಬಂಧಿಸಿದ ಕೆಲಸ ಆತನದ್ದು.

ಪೊಲೀಸು ಅಧಿಕಾರಿಯಾಗಿ ಹೆಸರು ಮಾಡುವಾಗ ಆತ ಹಲವಾರು ಅಡೆತಡೆ ದಾಟಿ ಬಂದಿದ್ದ. ಸ್ಥಳೀಯ ಚರ್ಚ್ ಕಾಯರ್‌ನ ಸದಸ್ಯನಾಗಿ, ಒಳ್ಳೆಯ

ಕುಟುಂಬದ ವ್ಯಕ್ತಿ ಎಂದು ಜನರ ನಡುವೆ ಪರಿಚಿತನಾಗಿದ್ದ. ತೀರಾ ಬಡತನದ ನಡುವಿಂದ ಎದ್ದು ಬಂದು ಇದೆಲ್ಲ ಸಾಧಿಸಿದ್ದು ಡೇವಿಸ್ ಹೆಮ್ಮೆಗೆ ಕಾರಣವಾಗಿತ್ತು.

ಆತನಿಗೆ ಸದಾ ಒಂದೇ ಆತಂಕ. ತಾನು ಮತ್ತೆ ಬಡವ ಆಗಿಬಿಟ್ಟರೆ!' ಅದಕ್ಕಾಗಿ ಒಂದಿಷ್ಟು ಹೆಚ್ಚು ದುಡ್ಡು ಮಾಡುವುದು ಸಾಧ್ಯವೇ? ಎಂದೇ ಸದಾ ಚಿಂತಿಸುತ್ತಿದ್ದ. ಎಂದು ಆತನ ಗೆಳೆಯರು ಹೇಳುತ್ತಾರೆ. ಪೊಲೀಸ್ ಆಗಿದ್ದಾಗಲೇ ಸಣ್ಣ ಪುಟ್ಟ ಅಡ್ಡ ಹಾದಿಗಳಿಂದ ಅವನು ದುಡ್ಡು ಮಾಡಿದ್ದ ಎಂದೂ ಇವರು ಹೇಳುತ್ತಾರೆ.

ಪೊಲೀಸ್ ಹುದ್ದೆಯಿಂದ ನಿವೃತ್ತನಾಗುವ ಸ್ವಲ್ಪ ದಿನಕ್ಕೆ ಮುಂಚೆ ತಾನು ಮೆರಿಂಗೋ ಕೌಂಟಿಯ ಶರೀಫ್ ಹುದ್ದೆಗೆ ಸ್ಪರ್ಧಿಸಬೇಕು ಎಂಬ ಆಸೆ ಮೊಳೆಯಿತು. ಸುಧಾರಣೆ, ಆಡಳಿತದಲ್ಲಿ ಸಾಕಷ್ಟು ಬದಲಾವಣೆ ತರುವ ಭರವಸೆ ನೀಡಿ ಕಣಕ್ಕೆ ಇಳಿದ.



ಜೀನ್

ಬೇರೆ ಅಭ್ಯರ್ಥಿಗಳ ಬಗ್ಗೆ ಬರೆಯುವ ಹಾಗೆ ಸಟ್ಟನ್ ದಂಪತಿಗಳು ಡೇವಿಸ್ ಬಗ್ಗೆಯೂ ತಮ್ಮ ಪತ್ರಿಕೆಯಲ್ಲಿ ನಿಷ್ಪಕ್ಷಪಾತದಿಂದ ಬರೆದು, ಆತ ಅಧಿಕಾರಿಯಾಗಿದ್ದು, ಸಮಾಜದಲ್ಲಿ ಆತನ ಬಗೆಗಿರುವ ಗಣ್ಯತೆ ಎಲ್ಲ ವಿವರಿಸಿದ್ದರು.

ಸಹಜವಾಗಿಯೇ ಆತ ಗೆದ್ದು ಬಂದ. ಆತನ ಗೆಲುವಿಗೆ ಜಾಣತನದಿಂದ ಮಾಡಿಕೊಂಡ ರಾಜಕೀಯ ಮೈತ್ರಿಯೂ ಕಾರಣವಾಗಿತ್ತು. ಕರಿಯ ವಕೀಲ ಬಾರೋನ್ ಲ್ಯಾಂಕ್‌ಸ್ಟರ್ ಜೊತೆ ಒಳಗೊಳಗೇ ಮೈತ್ರಿ ಸಾಧಿಸಿದ. ಮುಂದೆ ಈತನೇ ಜಿಲ್ಲಾ ಅಟಾರ್ನಿ ಆಗಿ ನೇಮಕಗೊಂಡ.

ಡೇವಿಸ್ 1991ರಲ್ಲಿ ಗೆದ್ದು ಅಧಿಕಾರವಹಿಸಿಕೊಂಡ ಕೂಡಲೇ ತನ್ನ ಪ್ರಭುತ್ವ ಸ್ಥಾಪಿಸಿದ. ಗಸ್ತು ತಿರುಗುವ ಪ್ರತಿ ಪ್ಯಾಟ್ರೋಲ್ ಕಾರ್‌ನ ಮಗ್ಗುಲಲ್ಲೂ ಆತನ ಹೆಸರು ರಾರಾಜಿಸುವಂತೆ ಮಾಡಿದ. ತನ್ನ ಕೈಕೆಳಗಿನ ಅಧಿಕಾರಿಗಳನ್ನು ಬದಲಿಸಿ ಬೇಕಾದವರನ್ನು ನೇಮಿಸಿಕೊಂಡ. ಇದರ ಜೊತೆಗೇ ಮತ್ತೊಂದು ಮುಖ್ಯ ಕೆಲಸ ಅವನು ಮಾಡಿದ. ಅವನ ಸಹಾಯಕರು ಯಾರೂ, ಯಾವುದೇ ವಿಷಯದಲ್ಲೂ ಪತ್ರಿಕೆಗಳಿಗೆ ಮಾಹಿತಿ ಕೊಡದಂತೆ ಬಾಯಿ ಬಂದು ಮಾಡಿದ. ಅವರೆಲ್ಲರಿಂದ ಆ ಕುರಿತ ಪತ್ರಕ್ಕೆ ಸಹಿ ಪಡೆದುಕೊಂಡ.

ಒಂದು ದಿನ 'ಡೆಮೋಕ್ರಾಟ್ ರಿಪೋರ್ಟರ್' ಆಫೀಸಿಗೂ ಬಂದು ವಿಷಯ ಹೇಳಿದ. 'ಇನ್ನು ಮುಂದೆ ಶರೀಫ್ ಕಾರ್ಯಾಲಯದ ವಿಚಾರ ಏನೇ ಬೇಕಿದ್ದರೂ ನನ್ನನ್ನು ಬಂದು ಕೇಳಬೇಕು...'

ಪತ್ರಿಕೆ ನಡೆಸುತ್ತಿದ್ದ ಸಟ್ಟನ್ ದಂಪತಿಗಳಿಗೆ ಯಾವ ವಿವರ ಯಾರಿಂದ ಪಡೆಯಬೇಕು ಎಂಬುದು ಚೆನ್ನಾಗಿ ಗೊತ್ತಿತ್ತು. ಓದುಗರೇ ಅವರಿಗೆ ಮುಖ್ಯ. ಪತ್ರಿಕೆ ಮಾಡುತ್ತಾ ಇದ್ದುದು ಡೇವಿಸ್‌ನ ಹೇಳಿಕೆಗಳನ್ನು ಅಚ್ಚು ಮಾಡಲು ಅಲ್ಲ ಎಂಬುದು ತಿಳಿದಿತ್ತು. ಅದನ್ನೇನೂ ಅವರು ಬಾಯಿಬಿಟ್ಟು ಹೇಳಲಿಲ್ಲ. ಶರೀಫ್ ಡೇವಿಸ್ ತನ್ನ ಆಫೀಸಿನ ಎಲ್ಲರ ಬಾಯಿ ಬಂದ್ ಮಾಡಿದ್ದರೂ ಸಹಾಯಕ ಎಲ್ಮರ್ ಕೀತ್ ಬ್ರೆಕನ್ ಬ್ರಿಜ್‌ಗೆ ಮಾತ್ರ ಇದರಿಂದ ರಿಯಾಯಿತಿ ನೀಡಿದ್ದ. ಈತ ಸಟ್ಟನ್ ದಂಪತಿಗಳಿಗೆ ಚಿಕ್ಕ ಹುಡುಗ ಇದ್ದಾಗಿಂದಲೂ ಪರಿಚಿತ. ಮನೆಯವರೆಲ್ಲ ಅವನನ್ನು ಸನ್ನಿ ಎಂದು ಕರೆಯುತ್ತಾ ಇದ್ದರು. ಇಪ್ಪತ್ಮೂರನೇ ವರ್ಷದಲ್ಲಿ ಶರೀಫ್ ಕಛೇರಿಯಲ್ಲಿ ಕೆಲಸಕ್ಕೆ ಸೇರಿದ. ಬ್ರೆಕನ್ ಬ್ರಿಜ್, ಅದಕ್ಕೆ ಮುಂಚೆ ಮೆರಿಂಗೋ ಕೌಂಟಿಯ ದೊಡ್ಡ ಪಟ್ಟಣ ಡೆಮಾಪೊಲಿಸ್‌ನಲ್ಲಿ ಪೊಲೀಸನಾಗಿದ್ದ. ಮುದ್ದಾದ ಹುಡುಗಿ ಒಬ್ಬಳನ್ನು ಮದುವೆ ಆಗಿದ್ದ. ಆಕೆಗೆ ಉತ್ತಮ ಟೀಚರ್ ಎಂಬ ಮಾನ್ಯತೆ ಇತ್ತು.

ಶರೀಫ್ ಕಚೇರಿಯಲ್ಲಿ ಕೆಲಸಕ್ಕೆ ಸೇರಿದ ಬ್ರೆಕೆನ್ ಬ್ರಿಜ್ ಡ್ರಗ್ ನಿಯಂತ್ರಣ ದಳದ ಅಧಿಕಾರಿ ಆದ. ಅವನ ಜೊತೆಗೆ ರಾಬರ್ಟ್ ಪೆಕೆನ್ಸ್ ಎಂಬ ಇನ್ನೊಬ್ಬನಿದ್ದ. ಇಬ್ಬರೂ ಸೇರಿ ಮೆರಿಂಗೋ ಕೌಂಟಿಯಲ್ಲಿಯೇ ಡ್ರಗ್‌ಗಳ ಹಾವಳಿ, ಮಾದಕ ವಸ್ತು ವಿತರಕರ ಪಿಡುಗು ನಿವಾರಿಸುವುದಾಗಿ ಸಾರಿದರು. ಬ್ರೆಕನ್ ಬ್ರಿಜ್ ಶಾಲೆಗಳಿಗೆ ಭೇಟಿ ಇತ್ತು ಡ್ರಗ್ ಪಿಡುಗಿನ ಬಗ್ಗೆ ಮಕ್ಕಳಿಗೆ ತಿಳಿವಳಿಕೆ ನೀಡುತ್ತಿದ್ದ. ಅಂಥ ಸಂದರ್ಭಗಳಲ್ಲಿ ತಾವು ವಶಪಡಿಸಿಕೊಂಡ ಡ್ರಗ್, ಸ್ಲೈಡ್ ಪ್ರದರ್ಶನ ಮುಂತಾದುವನ್ನು ತುಂಬಾ ಸಮರ್ಥವಾಗಿ ಬಳಸಿಕೊಳ್ಳುತ್ತಾ ಇದ್ದ.

ಹೊಸದಾಗಿ ಬಂದ ಶರೀಫ್ ಮತ್ತು ಆತನ ಸಹಾಯಕರು ಡ್ರಗ್ ನಿವಾರಣೆಗೆ ಕೈಗೊಂಡ ಕ್ರಮಗಳ ಬಗ್ಗೆ ಸಹಜವಾಗಿಯೇ ಉತ್ಸಾಹದಿಂದಲೇ ವರದಿ ಮಾಡಿತು 'ರಿಪೋರ್ಟರ್'.

ಇದರ ನಡುವೆಯೇ ಡೇವಿಸ್ ಕುರಿತಾದ ಒಡಕು ದನಿಗಳು ಅಲ್ಲಲ್ಲಿ ಪಿಸುಮಾತಾಗಿ ಸಟ್ಟನ್ ದಂಪತಿಗಳ ಕಿವಿಗೆ ಬೀಳುತ್ತಾ ಇದ್ದವು. ಮೆರಿಂಗೋ ಕೌಂಟಿಯಲ್ಲಿ ಡ್ರಗ್ ಪಿಡುಗು ನಿವಾರಣೆಗೆ ಆಂದೋಲವನ್ನು ಆರಂಭಿಸಿರುವ ಡೇವಿಸ್ ಮತ್ತು ಆತನ ಸಹಾಯಕರು ಇಂಥ ಕೆಲಸ ಮಾಡುವುದು ಸಾಧ್ಯವೇ ಇಲ್ಲ ಎನಿಸುತ್ತಿತ್ತು. ಆದರೆ ಮತ್ತೆ ಮತ್ತೆ ಅದೇ ಒಡಕು ಧ್ವನಿ ಕೇಳಲು ತೊಡಗಿದಾಗ 'ರಿಪೋರ್ಟರ್'ನ ಜನ ಎಚ್ಚೆತ್ತುಕೊಂಡರು. ಅಲ್ಲಲ್ಲಿ ವಿಚಾರಿಸುತ್ತಾ ಹೋದಾಗ, ಇಡೀ ಪ್ರದೇಶದ ಕಾನೂನು ನಿರ್ವಹಿಸಬೇಕಾದ ಮನುಷ್ಯನೆ ಆ ಎಲ್ಲ ಕಾನೂನು ಮುರಿದು ವ್ಯವಹಾರಕ್ಕೆ ತೊಡಗಿರುವುದು ಖಚಿತವಾಯಿತು.

### ಭ್ರಷ್ಟಾಚಾರದ ಕಲೆಗಳು

ರೋಜರ್ ಡೇವಿಸ್ ಮೆರಿಂಗೋ ಕೌಂಟಿಯ ಶರೀಫ್ ಆಗಿ ಆಯ್ಕೆ ಆಗಿ ಬಂದ ಮೊದಲಲ್ಲಿ ತನ್ನ ಹದಿನಾರು ವರ್ಷದ ಮಗಳಿಗೆ ಕ್ರಿಸ್ಮಸ್ ಸಂದರ್ಭದಲ್ಲಿ ಒಂದು ಬೆಲೆ ಬಾಳುವ ಉಡುಗೊರೆಯನ್ನು ನೀಡಿದ್ದ. ಮೂರು ಸಾವಿರ ಡಾಲರ್ ಬೆಲೆಯ ಈ ಮೋಟಾರಲ್ಲಿ ಕುಳಿತು ಆಕೆ ಎಲ್ಲೆಲ್ಲೂ ಸುತ್ತುತ್ತಾ ಇದ್ದಳು. ತಂದೆ ಮಗಳಿಗೆ ಇಂಥ ಉಡುಗೊರೆ ನೀಡುವುದು, ಆಕೆ ಅದನ್ನೇರಿಕೊಂಡು ಎಲ್ಲೆಂದರಲ್ಲಿ ಸುತ್ತುವುದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ಆಶ್ಚರ್ಯ ಎಂದರೆ ಡೇವಿಸ್ ಮಗಳಿಗೆ ಕೊಡಿಸಿದ ವಾಹನಗಳ ದುಡ್ಡನ್ನು ತನ್ನ ಜೇಬಿಂದ ಕೊಟ್ಟಿರಲಿಲ್ಲ. ಆಫೀಸಿನ ದುಡ್ಡಿಂದ ಧಾರಾಳವಾಗಿ ಎತ್ತಿಕೊಟ್ಟಿದ್ದ.

ವಿವರಗಳನ್ನು ಪತ್ರಿಕೆ ಪತ್ತೆ ಮಾಡುತ್ತಾ ಇರುವಾಗಲೇ, ಕಾರ್ ಕೊಟ್ಟಿದ್ದ ಡೀಲರ್ ಬಳಿಗೆ ಹೋದ ಡೇವಿಸ್ ಆಫೀಸು ಹಣ ಆಫೀಸಿಗೇ ವಾವತಿ ಮಾಡಿ ತನ್ನ ಸ್ವಂತದ ಚೆಕ್ ಒಂದನ್ನು ನೀಡಿದ.

ಕಾರ್ ಖರೀದಿ ಅವ್ಯವಹಾರದ ವಿವರಗಳೆಲ್ಲ ಇದ್ದರೂ 'ರಿಪೋರ್ಟರ್' ಅದನ್ನು ವರದಿ ಮಾಡಲು ಹೋಗಲಿಲ್ಲ. ಡೇವಿಸ್ ಹುದ್ದೆಗೆ ಹೊಸಬ. ಗೊತ್ತಿಲ್ಲದೆಯೇ ತಪ್ಪು ಮಾಡಿ ಅನಂತರ ಅದನ್ನು ಅರಿತುಕೊಂಡು ತಿದ್ದಿಕೊಂಡಿರಬಹುದು ಎಂಬುದು ಒಂದು ಕಾರಣ' ಈ ವಿವರಗಳನ್ನು ನೀಡಿದ್ದವನು ಶರೀಫ್ ಆಫೀಸಿನ ಒಬ್ಬ ಉದ್ಯೋಗಿ. ವರದಿ ಪ್ರಕಟ ಆದರೆ ಆತನನ್ನು ಕೆಲಸದಿಂದ ಕಿತ್ತು ಹಾಕುವ ಎಲ್ಲ ಸಾಧ್ಯತೆಯೂ ಇತ್ತು. ಹೀಗಾಗಿ 'ಕಾಯ್ದು ನೋಡೋಣ' ಎಂದುಕೊಂಡರು.

ಈ ನಡುವೆ ಡೇವಿಸ್ ಪರವಾದ ಕೆಲವರು ಇನ್ನೊಂದು ವಾದವನ್ನೂ ಮುಂದಿಟ್ಟರು. ಶರೀಫ್ ಆಫೀಸಿನ ಖರೀದಿಗಳಿಗೆ ಮಾರಾಟ ತೆರಿಗೆ ಬೀಳುವುದಿಲ್ಲ. ಆ ಕಾರಣಕ್ಕೆ ಆತ ಮಗಳಿಗೆ ನೀಡಿದ ಉಡುಗೊರೆಯನ್ನು ಆಫೀಸಿನ ಲೆಕ್ಕದಲ್ಲೇ ಖರೀದಿಸಿದ್ದಾನೆ. ಆನಂತರ ಆಫೀಸಿನ ದುಡ್ಡು ಆಫೀಸಿಗೇ



ಜೆಸ್ಸ್ ಲ್ಯಾಂಗ್‌ಲೀ

ಹಿಂದಿರುಗಿಸಿದ್ದಾನೆ ಎಂಬುದು ಅವರ ವಾದ. 'ಇದನ್ನು ನಂಬುವುದೋ ಬಿಡುವುದೋ' ಸಟ್ಟನ್ ದಂಪತಿಗಳಿಗೆ ಗೊಂದಲ.

ಮುಂದೆ ಕೆಲವೇ ದಿನಗಳಲ್ಲಿ ಡೇವಿಸ್‌ನ ಇನ್ನೊಂದು ಮುಖದ ಬಗ್ಗೆ ಹಲವಾರು ವಿವರಗಳು ಜೀನ್ ಮತ್ತು ಗುಡ್‌ಲೋಗೆ ತಿಳಿಯುತ್ತಾ ಹೋದವು. ಡೇವಿಸ್‌ನ ಆಪ್ತ ಸಹಾಯಕ ಒಬ್ಬ ಶಿಕ್ಷೆಗೊಳಗಾದ ವ್ಯಕ್ತಿ. ಆತ ತಾತ್ಕಾಲಿಕ ಹುದ್ದೆಯಲ್ಲಿ ಇದ್ದ. ಅಮೇರಿಕಾದ ಕಾನೂನಿನಲ್ಲಿ ಶಿಕ್ಷೆಗೊಳಗಾದ ವ್ಯಕ್ತಿಗಳು ಪಿಸ್ತೂಲು ಅಥವಾ ಬಂದೂಕು ಇಟ್ಟುಕೊಳ್ಳುವಂತಿಲ್ಲ. ಕ್ರಿಮಿನಲ್ ಅಪರಾಧಕ್ಕೆ ಶಿಕ್ಷೆಗೊಳಗಾಗಿದ್ದ ಈ ವ್ಯಕ್ತಿ ಪಿಸ್ತೂಲು ಹಿಡಿದು ಠಳಾಯಿಸುತ್ತಾ ಇದ್ದ. ಡೇವಿಸ್‌ನ ವಿಚಾರಿಸಿದರೆ 'ಅಂಥ ಯಾವುದೇ ಶಿಕ್ಷೆಯೂ ಅವನಿಗಾಗೇ ಇಲ್ಲ' ಎಂದು ದಬಾಯಿಸಿಬಿಟ್ಟ.

ದಾಖಲೆಗಳನ್ನು ಖುದ್ದು ಹುಡುಕಿ ಪರಿಶೀಲಿಸಿದಾಗ, ಆ ವ್ಯಕ್ತಿ ಅಪರಾಧ ಮಾಡಿದ್ದು, ಅದಕ್ಕಾಗಿ ಶಿಕ್ಷೆ ಆಗಿದ್ದೂ ಖಚಿತವಾಯಿತು. ಸರಿ ಎಂದು ಆ ಕುರಿತೇ ಪತ್ರಿಕೆಯಲ್ಲಿ ವರದಿ ಮಾಡಿದರು. ಇದರ ಪರಿಣಾಮ ಎಂದರೆ ಆ ವ್ಯಕ್ತಿಯನ್ನು ಡೇವಿಸ್ ಕೆಲಸದಿಂದ ತೆಗೆದು ಹಾಕಿ ತೆಪ್ಪಗಾದ.

ಆನಂತರ ಮಾದಕ ವಸ್ತುಗಳ ಪತ್ತೆ ಮತ್ತು ನಿಯಂತ್ರಣಕ್ಕೆ ಬಳಸಲಾಗುವ ನಿಧಿಯಲ್ಲಿ ಡೇವಿಸ್ ಅಪರಾತಪರಾ ಮಾಡಿರುವುದಾಗಿ ತಿಳಿದು ಬಂತು. ಕೆಲವು ಸಂದರ್ಭಗಳಲ್ಲಿ ಈ ನಿಧಿಯಿಂದ ಶರೀಫ್ ಆದವನು, ಯಾರಿಗೆ ನೀಡುತ್ತಿದ್ದೇನೆ ಎಂದು ತಿಳಿಸದೇ, ಕಳ್ಳ ಪೇಟೆಯ ಡ್ರಗ್ ಖರೀದಿಸುವ ನೆವದಲ್ಲಿ ಪತ್ತೆಗೆ ಹೋಗುವ ದಳದವರಿಗಾಗಿ ಖರ್ಚು ಮಾಡಬೇಕಾಗುತ್ತದೆ. ಇದನ್ನು ಬಳಸಿಕೊಂಡು ಶರೀಫ್ ಆಗಿದ್ದ ಡೇವಿಸ್ ಸಾಕಷ್ಟು ಹಣ ತೆಗೆದುಕೊಂಡು ತನ್ನ ಜೇಬಿಗೇ ಸೇರಿಸಿಬಿಟ್ಟಿದ್ದ.

ಮೆರಿಂಗೋ ಕೌಂಟಿಯ ಲೆಕ್ಕದ ದಾಖಲೆಗಳನ್ನು ನೋಡಿದಾಗ ಕೆಲವು ಲೆಕ್ಕಗಳನ್ನು ತಾನೇ ಕೈಯಾರೆ ಬರೆದಿದ್ದು ಹಾಗೂ ರಾಜ್ಯದ ಆಡಿಟ್ ವರದಿಯಲ್ಲಿ ಡೇವಿಸ್ ಐದು ಸಾವಿರ ಡಾಲರ್ ಹಣ ಡ್ರಗ್ ನಿಧಿಗೆ ವಾಪಸು ತುಂಬಬೇಕೆಂದು ಆದೇಶಿಸಿದ್ದು ಪತ್ತೆ ಆಯಿತು. ಇದನ್ನು ಅಧ್ಯಯನ ಮಾಡಿದ ಜೀನ್ ಸಟ್ಟನ್ ವಿಶೇಷ ವರದಿ ಸಿದ್ಧಪಡಿಸಿ ಪ್ರಕಟಿಸಿದಳು. ಅದರಲ್ಲಿ ಲೆಕ್ಕದ ಪುಸ್ತಕದಲ್ಲಿ ಡೇವಿಸ್ ನಮೂದಿಸಿದ್ದ ಅಂಶಗಳು ಹಾಗೂ ಆತ ಐದು ಸಾವಿರ ಡಾಲರ್ ವಾಪಸ್ ಮಾಡಿದ್ದ ದಾಖಲೆಗಳನ್ನೆಲ್ಲ ಪ್ರಕಟಿಸಲಾಗಿತ್ತು. ಡೇವಿಸ್‌ನ ಸಂದರ್ಶನ ಕೂಡ ನಡೆಸಿದ ಆಕೆ ಸರ್ಕಾರ ಒದಗಿಸಿದ್ದ ನಿಧಿಯ ಹಣ ಏನಾಯಿತು? ಎಂದು ಪ್ರಶ್ನಿಸಿದರೆ, ಅದಕ್ಕಾತ ನೇರ ಉತ್ತರ ನೀಡಲೇ ಇಲ್ಲ. ಸಟ್ಟನ್ ದಂಪತಿಗಳಿಗೆ ಇದೇ ಬಹು ಮುಖ್ಯ ಅಂಶವಾಯಿತು. ಜನ ನೀಡುವ ತೆರಿಗೆ ಹಣ ಹೀಗೆ ದುರುಪಯೋಗ ಆಗಬಾರದೆಂಬುದೇ ಅವರ ಕಾಳಜಿಯಾಗಿತ್ತು. ಇನ್ನೊಂದು ವಿಚಿತ್ರ ಪ್ರಕರಣವೂ ಪತ್ತೆ ಆಯಿತು.ಕೌಂಟಿಯ ಹುಚ್ಚಾಸ್ಪತ್ರೆಗಳಿಂದ ರೋಗಿಗಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಅಗತ್ಯವಾದಾಗ ಸಾಗಿಸುವುದು ಶರೀಫ್ ಕಚೇರಿಯ ಕೆಲಸದಲ್ಲಿ ಒಂದು ಭಾಗ. ಹಾಗೆ ವರ್ಗಾವಣೆ ಮಾಡಿದಾಗೆಲ್ಲ ಆ ಮಾನಸಿಕ ಕೇಂದ್ರಗಳವರು ಡೇವಿಸ್ ಹೆಸರಿಗೆ ದೇಣಿಗೆಗಳನ್ನು ನೀಡಬೇಕು ಎಂದು ಬರೆದಿದ್ದ ಪತ್ರ ಒಂದು ಸಿಕ್ಕಿತು. ಅದೂ 'ಡೆಮೋಕ್ರೆಟ್ ರಿಪೋರ್ಟರ್' ನಲ್ಲಿ ಪ್ರಕಟವಾದ ಮೇಲೆ, ಹಾಗೇ ದೇಣಿಗೆಯಾಗಿ ಪಡೆದಿದ್ದ 700 ಡಾಲರ್‌ಗಳನ್ನು ವಾಪಸು ಮಾಡಿದ.

ಹೀಗಾದ ಮೇಲೆ ಒಂದಾದರೂ ಬಹಿರಂಗ ಹೇಳಿಕೆ ಆತ ನೀಡಲಿಲ್ಲ. ಬದಲಿಗೆ ಸಾರ್ವಜನಿಕ ಸೇವೆಯಲ್ಲಿ ನಿರತನಾಗಿರುವ ತನ್ನಂಥವನ ಮೇಲೆ ಪತ್ರಿಕೆಯ ಗುಳ್ಳೆನರಿಗಳು ಮುಗಿಬಿದ್ದಿವೆ ಎಂದುಕೊಂಡು ಒಳಗೇ ಕುದಿಯ ತೊಡಗಿದ. ಅವನ ಮನಸ್ಸೊಳಗಿನ ಕಹಿಯನ್ನು ಅಲ್ಲಲ್ಲಿ ಹೊರ ಸೂಸಲು ಆತನ ಸಹಾಯಕರ ದಂಡೇ ಇತ್ತು.ಡೇವಿಸ್ ಬಗ್ಗೆ ಬರೆಯುತ್ತಾ ಇರುವುದೆಲ್ಲ ಹಸಿ ಸುಳ್ಳು, ಗುಡ್‌ಲೋ ಮತ್ತು ಜೀನ್ ಸಟ್ಟನ್ ಕಥೆ ಕಟ್ಟಿ ಪ್ರಕಟಿಸುತ್ತಿದ್ದಾರೆ ಎಂದೆಲ್ಲ ಇವರು ಪ್ರಚಾರ ಆರಂಭಿಸಿದರು.

ಇಂಥ ಪ್ರಕರಣ ಬಯಲಾದಾಗ ಜಿಲ್ಲಾ ಅಟಾರ್ನಿಯೇ ಶರೀಫ್ ವಿರುದ್ಧ ಮೊಕದ್ದಮೆ ಹೂಡಬಹುದು. ಆದರೆ ಡೇವಿಸ್‌ನ ಮಿತ್ರನಾಗಿದ್ದ ಆತನಿಂದಲೇ ನೇಮಕಗೊಂಡಿದ್ದ ಲ್ಯಾಂಕ್‌ಸ್ಟರ್ ಆ ಗೋಜಿಗೇ ಹೋಗಲಿಲ್ಲ. ಆತ ಎಂದೂ ಡೇವಿಸ್ ವಿರುದ್ಧ ಕ್ರಮ ಕೈಗೊಳ್ಳುವವನೇ ಅಲ್ಲ ಎಂದು ತಿಳಿದಾದ ಮೆಲೆ ಸಟ್ಟನ್ ದಂಪತಿಗಳು ತಮ್ಮ ವರದಿ, ದಾಖಲೆಗಳ ಸಮೇತ ರಾಜ್ಯದ ಹಿರಿಯ ಅಧಿಕಾರಿಗಳಿಗೆ ಮೊರೆ ಹೋದರು.

ಸಾಕಷ್ಟು ಶ್ರಮವಹಿಸಿ ಸಂಗ್ರಹಿಸಿದ ಸಾಕ್ಷ್ಯಾಧಾರ, ಆರೋಪ ಸಾಬೀತುಗೊಳಿಸುವ ದಾಖಲೆಗಳೇ ಇದ್ದರೂ, ರಾಜ್ಯಮಟ್ಟದ ಅಧಿಕಾರಿಗಳೂ ಈ ಬಗ್ಗೆ ತಲೆ ಕೆಡಿಸಿಕೊಂಡ ಹಾಗೆ ಕಾಣಲಿಲ್ಲ. 'ಯಾರಿಗೂ ಈ ಬಗ್ಗೆ ಆಸಕ್ತಿಯೇ ಇಲ್ಲವೇನೋ!' ಅನಿಸುತ್ತಿತ್ತು ಗುಡ್‌ಲೋಗೆ. ಆದರೂ ಆತ ಎಡಬಿಡದೇ ವರ್ಷಗಟ್ಟಲೇ ಡೇವಿಸ್ ವಿರುದ್ಧ ಬರೆಯುತ್ತಲೇ ಹೋದ.

ಚಿಕ್ಕವನಿದ್ದಾಗ ಟರ್ಕಿ ಕೋಳಿಯ ಬೇಟೆಗೆ ಹೋದಾಗೆಲ್ಲ, ಅದೊಂದು ಸಣ್ಣ ತಪ್ಪು ಮಾಡುವವರೆಗೂ ತಾಳ್ಮೆಯಿಂದ ಕಾಯ್ದರೆ ಮಾತ್ರ ಅದನ್ನು ಹಿಡಿಯಲು ಸಾಧ್ಯ, ಇಲ್ಲವಾದಲ್ಲಿ ಸುಮ್ಮನೆ ಗಾಳಿ ಗುದ್ದಿ ಮೈನೋಯಿಸಿ ಕೊಂಡಂತೆ ಎಂಬುದು ಚೆನ್ನಾಗಿ ತಿಳಿದಿತ್ತು. ಹಾಗೆ ಡೇವಿಸ್‌ನನ್ನು ಬಲಿ ಹಾಕಲು ಕಾಯುತ್ತಾ ಉಳಿಯುವುದು ಅನಿವಾರ್ಯವಾಗಿತ್ತು.

ಜನರ ವಿರೋಧ ಕಟ್ಟಿಕೊಳ್ಳುವುದು ಹೊಸದೇನೂ ಅಲ್ಲ ಗುಡ್‌ಲೋಗೆ. ಆತನ ತಂದೆ ಪತ್ರಿಕೆ ನಡೆಸುತ್ತಾ ಸಾಕಷ್ಟು ಜನ ವಿರೋಧ ಕಟ್ಟಿಕೊಂಡಿದ್ದರು. ಅಮೇರಿಕಾದಲ್ಲಿ 'ಸಿವಿಲ್ ರೈಟ್ಸ್' ಹೋರಾಟ ತೀವ್ರಗೊಂಡಿದ್ದ 1963ರಲ್ಲಿ ಸ್ಥಳೀಯ ಪಾದ್ರಿ ಜೋ ಪ್ಯಾಟರ್ಸ್‌ನ್ ನೀಗ್ರೋಗಳು ಚರ್ಚಿನಲ್ಲಿ ಸಾಮೂಹಿಕ ಪ್ರಾರ್ಥನೆಗೆ ಬರುವುದನ್ನು ಸ್ವಾಗತಿಸುವುದಾಗಿ ಹೇಳಿದ್ದ. ಅದು ರಿಪೋರ್ಟರ್‌ನಲ್ಲಿ ದೊಡ್ಡ ಸುದ್ದಿ ಆಯಿತು. ಅಷ್ಟೇ ಅಲ್ಲ ಪತ್ರಿಕೆ ಆತನನ್ನು ಬೆಂಬಲಿಸಿತು. ಆದರೆ ಜನ ಅದನ್ನು ವಿರೋಧಿಸಿದರು. ಕೊನೆಗೆ ಜೋ ಪ್ಯಾಟರ್ಸ್‌ನ್ ರಾಜೀನಾಮೆ ನೀಡಿ ನಿರ್ಗಮಿಸಬೇಕಾಯಿತು. ಆಗಲೂ ಗುಡ್‌ಲೋನ ತಂದೆ ರಾಬರ್ಟ್ ಸಟ್ಟನ್ ಪಾದ್ರಿಯ ನಿಲುವನ್ನು ಅಭಿನಂದಿಸಿ ಲೇಖನ ಬರೆದು, ಜನರ ಸಿಟ್ಟಿಗೆ ಕಾರಣವಾದರು. ಅದರಿಂದ ಪತ್ರಿಕೆಯ ಆದಾಯಕ್ಕೂ ಕುತ್ತು ಬಂತು. ಆದರೆ ಹಿಡಿದ ನಿಲುವನ್ನೂ ಮಾತ್ರ ಸಡಿಸಲಿಲ್ಲ. ಇದನ್ನು ಗುಡ್‌ಲೋ ಚೆನ್ನಾಗಿ ಅರಿತಿದ್ದರು. ಅವರದೂ ಅದೇ ಧೋರಣೆ.

'ಡೆಮೋಕ್ರ್ಯಾಟಿಕ್ ರಿಪೋರ್ಟರ್' ಪತ್ರಿಕೆಯನ್ನು 1917ರಲ್ಲಿ ರಾಬರ್ಟ್ ಖರೀದಿಸಿ ನಡೆಸಿಕೊಂಡೇ ಬಂದರು. ಮಗ ಗುಡ್‌ಲೋ ತಂದೆಯ ಪತ್ರಿಕೆಯ ಜೊತೆಗೇ ಬೆಳೆದರು. ಅದೊಂದು ಸಣ್ಣ ಪತ್ರಿಕೆ. ಕುಟುಂಬದ ಸದಸ್ಯರೇ ಕೆಲಸ ಮಾಡಿ ಹೊರ ತರಬೇಕಾದ ಪತ್ರಿಕೆ. ಗುಡ್‌ಲೋ ಆರು ವರ್ಷದ ಹುಡುಗ ಆಗಿದ್ದಾಗ ತಂದೆಯ ಪತ್ರಿಕೆಯಲ್ಲಿ ತೊಡಗಿಕೊಂಡರು. ಕಸ ಗುಡಿಸುವುದರಿಂದ

ಹಿಡಿದು, ಸ್ವಲ್ಪ ದೊಡ್ಡವನಾದ ಮೇಲೆ ಬೀದಿಯಲ್ಲಿ ನಿಂತು ಪತ್ರಿಕೆ ಮಾರುವವರೆಗೂ ಎಲ್ಲ ಕೆಲಸ ಮಾಡಿದ್ದ ಆತ ಕಾಲೇಜು ಓದುವಾಗ ಅಲ್ಲಿನ ವಿದ್ಯಾರ್ಥಿಗಳ ಪತ್ರಿಕೆ ಸಂಪಾದಿಸುತ್ತಿದ್ದ ನೀಲಿ ಕಣ್ಣಿನ ಹುಡುಗಿ ರೇಡ್ಮಾರ್ಕ್ಸ್‌ನ ಭೇಟಿಯಾಯಿತು. 1964ರಲ್ಲಿ ಇಬ್ಬರೂ ಮದುವೆ ಆದರು.

ಪತ್ರಿಕೆಯ ವ್ಯವಸ್ಥಾಪಕ ಸಂಪಾದಕಿ ಆಗಿರುವ ಜೀನ್, ಅದರ ಮುಖ್ಯ ವರದಿಗಾರ್ತಿಯೂ ಹೌದು. ಹೊರಗೆ ಸುತ್ತಾಡಿ ವಿಷಯ ಸಂಗ್ರಹಿಸುವ ಕೆಲಸ ಎಲ್ಲ ಆಕೆಯದೇ. ನಿಜಕ್ಕೂ ಪತ್ರಿಕೆಯ ಎಲ್ಲ ಕೆಲಸ ಮಾಡುವುದು ಆಕೆ ಗಂಡ ಮೂದೇವಿಯ ಹಾಗೇ ಮನೆಯಲ್ಲಿ ಇರುತ್ತಾನೆ ಎಂದೇ ಜನರ ಭಾವನೆ. ವಾರವಿಡೀ ಆರಾಮಾಗಿ ಇದ್ದಂತೆ ಕಾಣುವ, ಪತ್ರಿಕೆ ಅಚ್ಚಿಗೆ ಹೋಗುವ ಮಂಗಳ ವಾರಗಳಂದು ಆತನ ನಿಜವಾದ ಹೆರಿಗೆ ಬೇನೆ ಆರಂಭವಾಗುತ್ತದೆ.

ಮೂರ್ಖರ ಗೇಲಿ, ಅನ್ಯಾಯದ ವಿರುದ್ಧ ಆಕ್ರೋಶ, ಅಧಿಕಾರಿಗಳ ಅಸಾಮರ್ಥ್ಯ ಬಗ್ಗು ಬಡಿಯುವಂಥ ಸಂಪಾದಕೀಯ ಅಂಥ ದಿನಗಳಲ್ಲಿ ಹುಟ್ಟಿಕೊಳ್ಳುತ್ತವೆ.

ಗುಡ್‌ಲೋ ಇರುವ ಮೆರಿಂಗೋ ಕೌಂಟಿಗೆ ಪ್ರಾಮಾಣಿಕತೆ ಮತ್ತು ಸರಿಯಾದ ಕಾನೂನು ಚಲಾವಣೆ ಮುಖ್ಯ ಎಂದೇ ಆತನ ಭಾವನೆ. ಹೀಗಾಗಿಯೇ ಆತ ಅರವತ್ತರ ದಶಕದಲ್ಲಿ ಪತ್ರಿಕೆ ಕೈಗೆತ್ತಿಕೊಂಡಾಗ 1200ರಷ್ಟಿದ್ದ ಪ್ರಸಾರ ಸಂಖ್ಯೆ ಮೂರೂವರೆ ಸಾವಿರ ಮುಟ್ಟಿದೆ.

ಯಾವಾಗ ಪತ್ರಿಕೆ ಡೇವಿಸ್ ವಿರುದ್ಧ ಸಮರ ಆರಂಭಿಸಿತೋ ಆಗಿಂದ ಫಜೀತಿ ಆರಂಭವಾಯಿತು. ಗೆಳೆಯರು ಪರಿಚಯದವರು ಗುಡ್‌ಲೋ ದಂಪತಿಗಳಿಗೆ ಬುದ್ಧಿ ಹೇಳಲಾರಂಭಿಸಿದರು. ಅಷ್ಟೆಲ್ಲ ದಾಖಲೆಗಳ ಪುರಾವೆ ಕಷ್ಟಪಟ್ಟು ಸಂಗ್ರಹಿಸಿ ವರದಿಗಳನ್ನು ತಯಾರಿಸಿದ್ದರೂ, ಅದೇಕೋ ಜನಕ್ಕೆ ಡೇವಿಸ್ ಬಗ್ಗೆಯೇ ನಂಬಿಕೆ, ಒಲವು. ಇಂಥ ಅಂಧ ಅಭಿಮಾನ ಸಹಜವಾಗಿ ಕೆಲವೇ ಕಾಲಕ್ಕೆ ಪತ್ರಿಕೆಯ ಬಗ್ಗೆ ಆಕ್ರೋಶವಾಗಿ ಪರಿವರ್ತನೆ ಆಯಿತು.

ಓದುಗರು ಡೇವಿಸ್ ಕುರಿತಾದ ವರದಿಗಳನ್ನು ದುರುದ್ದೇಶಪೂರಿತ, ತೇಜೋವಧೆಯ ಯತ್ನ ಎಂದೆಲ್ಲ ಬಣ್ಣಿಸಿ ಪತ್ರ ಬರೆಯಲಾರಂಭಿಸಿದರು. 'ಡೇವಿಸ್ ಪ್ರಾಮಾಣಿಕ ವ್ಯಕ್ತಿ. ಆತನಂಥವರು ನಮ್ಮ ಮೆರಿಂಗೋ ಕೌಂಟಿಗೆ ಬೇಕು. ಆತನನ್ನು ನಾವು ಉಳಿಸಿಕೊಳ್ಳುತ್ತೇವೆ' ಎನ್ನುವ ಮಟ್ಟಕ್ಕೂ ಓದುಗರು ಹೋದರು.

ಇದರ ಜೊತೆಗೇ ಬಾಯಿಗೆ ಬಂದ ಹಾಗೆ ಬೈದು ಬರೆದ ಪತ್ರಗಳೂ ಬರಲಾರಂಭಿಸಿದವು. ಫೋನಿನಲ್ಲಿ ಬೆದರಿಕೆ ಕರೆಗಳು ಬರಲಾರಂಭಿಸಿದವು. ಸಟ್ಟನ್ ದಂಪತಿಗಳು ಇಬ್ಬರು ಮಕ್ಕಳನ್ನೂ ಸುಮ್ಮನೆ ಬಿಡುವುದಿಲ್ಲ ಎಂಬಂಥ ಕರೆಗಳು ಹೆಚ್ಚಾದವು. 'ಪೆನ್ ಜೇಬಲ್ಲಿ ಇಟ್ಟುಕೊಂಡ ಧೈರ್ಯವಂತ ಜನ ನೀವು ಅಂತ ಗೊತ್ತು. ಎಲ್ಲಿಯೂ ಯಾವ ಸಾಕ್ಷಿಯೂ ಇರದಂಥ ಸ್ಥಳದಲ್ಲಿ ಸಿಕ್ಕಿ ಹಾಕಿಕೊಂಡರೆ ಇದೇ ಧೈರ್ಯ ಇರುತ್ತದೆಯೇ?...'

ಮತ್ತೊಂದು ಅನಾಮಧೇಯ ಪತ್ರದ ತಿರುಳು ಇದು. ಗೆಳೆಯರು, ಪರಿಚಿತರು ಒಬ್ಬೊಬ್ಬರಾಗಿ ದೂರಾಗತೊಡಗಿದರು. ಪತ್ರಿಕೆಯ ಪ್ರಸಾರ ಇದೇ ಮೊದಲ ಬಾರಿಗೆ ಇಳಿಮುಖವಾಗತೊಡಗಿತು. ಸ್ಥಳೀಯರು ನೀಡುತ್ತಿದ್ದ ಜಾಹೀರಾತುಗಳನ್ನು ನಿಲ್ಲಿಸಲಾರಂಭಿಸಿದರು.

1994 ಬಂತು. ಇಷ್ಟೆಲ್ಲ ವರ್ಷ ತಾವು ಮಾಡಿದ ವರದಿ ಪರಿಣಾಮ ಬೀರುವುದು ಖಂಡಿತ ಜನ ಪತ್ರಿಕೆಯನ್ನು ನಂಬುತ್ತಾರೋ! ರೋಜರ್ ಡೇವಿಸನನ್ನೋ! ಎಂದು ನಿರ್ಧರಿಸಲು ಮತ್ತೊಂದು ಚುನಾವಣೆ ಬಂತು. ಡೇವಿಸ್ ಮತ್ತೆ ಶೆರೀಫ್ ಹುದ್ದೆಗೆ ಸ್ಪರ್ಧಿಸಿದ. ಇನ್ನಿಬ್ಬರು ಕಣದಲ್ಲಿ ಇದ್ದರು. ಡೇವಿಸ್ ಮತ್ತು ಆತನ ಸಹಾಯಕ ಬ್ರೆಕನ್ ಬ್ರಿಜ್ ಮಾದಕ ವಸ್ತು ನಿಯಂತ್ರಣದಲ್ಲಿ ಮಾಡಿದ್ದಾರೆನ್ನಲಾದ ಸಾಧನೆಯೇ ಹೆಚ್ಚು ಪ್ರಚಾರ



ಪತ್ತೇದಾರ ಜಾರ್ಜ್ ಬ್ಯಾರೋಸ್

ಪಡೆಯಿತು. ಗುಡ್‌ಲೋ ನಿರೀಕ್ಷೆ ಮೀರಿ ಡೇವಿಸ್ ಪುನರಾಯ್ಕೆ ಆದ. ಅಧಿಕಾರ ವಹಿಸಿಕೊಂಡ ಕೂಡಲೇ ಬ್ರೆಕನ್ ಬ್ರಿಜ್‌ಗೆ ಭಡ್ತಿ ನೀಡಿ ಸಾರ್ಜೆಂಟ್ ಆಗಿ ನೇಮಿಸಿದ.

ಡೇವಿಸ್ ಪುನರಾಯ್ಕೆ ಆದ ವಿಚಾರ ತಿಳಿದಾಗ ಸಟ್ಟನ್ ದಂಪತಿಗಳಿಗೆ ನೋವು ಅಷ್ಟಿಷ್ಟಲ್ಲ.

**ಮೂರನೆಯ ಕಣ್ಣು**

ಎರಡನೇ ಬಾರಿ ಆಯ್ಕೆ ಆದ ಡೇವಿಸ್ ಇನ್ನಷ್ಟು ಪ್ರಬಲನಾದ. ಆತನ ಅಕ್ರಮಗಳು ವಿಸ್ತರಿಸಿದವು. ಶರೀಫ್ ಕಚೇರಿಯಲ್ಲಿ ಇನ್ನೊಬ್ಬ ಇದ್ದ. ಆತನ ಹೆಸರು ಜೆಸ್ಸಿ ಬ್ಯಾಗಲೀ. ಬೇರೆ ಹಳಬರನ್ನು ಕಿತ್ತು ಹಾಕಿದ ಹಾಗೆ ಈತನನ್ನು ಕಿತ್ತು ಹಾಕುವಂತಿರಲಿಲ್ಲ. ಏಕೆಂದರೆ ಈತ ತೀರಾ ಪ್ರಾಮಾಣಿಕ. ಅಂದೊಮ್ಮೆ ಮಹಿಳೆಯೊಬ್ಬಳ ಮೇಲೆ ಅಪರಿಚಿತರು ಗುಂಡು ಹಾರಿಸಲು ಯತ್ನಿಸಿದಾಗ ಆಕೆಯನ್ನು ಕಾಪಾಡಿದ್ದೂ ಅಲ್ಲದೇ, ಗುಂಡೇಟಿನಿಂದ ಒಂದು ಕಣ್ಣು ಕಳೆದುಕೊಂಡಿದ್ದ. ಅವನನ್ನು ಹೀರೋ ಎಂಬಂತೆ ಜನ ನೋಡುತ್ತಾ ಇದ್ದರು. ಅವನನ್ನು ದೂರ ಸಾಗಿಸಲು, ಊರಿನ ಹೊರವಲಯದ ಜೈಲಿನ ಸೂಪರಿಂಟೆಂಡೆಂಟ್ ಆಗಿ ನೇಮಿಸಿದ ಡೇವಿಸ್.



ಸರ್ಕಾರಿ ವಕೀಲ ಇ.ಟಿ.ರಾಲಿಸನ್

ಸರ್ಕಾರ ಊರಿನ ಜನಕ್ಕೆ ಗೊತ್ತಾಗದಂತೆ ತನಿಖೆ ನಡೆಸಲು ಜಾರ್ಜ್ ಬ್ಯಾರೋಸ್ ಎಂಬ ಗೂಢಚಾರಿಯನ್ನು ನೇಮಿಸಿತ್ತು. ಈತ ಲ್ಯಾಂಗ್ಲಿಯನ್ನು ಸಂಪರ್ಕಿಸಿದ. ಅಕ್ರಮ ನಡೆಸುತ್ತಿರುವ ಡೇವಿಸ್ ಮೇಲೆ ನಿಜಕ್ಕೂ ಕಾನೂನು ಕ್ರಮ ಜರುಗಿಸುವ ಪ್ರಾಮಾಣಿಕ ಪ್ರಯತ್ನ ನಡೆಸುವುದಾದರೆ ಮಾತ್ರ ತಾನು ನೆರವು ನೀಡುವುದಾಗಿ ಲ್ಯಾಂಗ್ಲೀ ಹೇಳಿದ್ದ.

ಬ್ಯಾರೋಸ್ ಒಂದೊಂದೇ ವಿಷಯ ತನಿಖೆ ಮಾಡುತ್ತಾ ಹೋದಂತೆ ಭಯಾನಕ ಸಂಗತಿಗಳು ಹೊರ ಬೀಳಲಾರಂಭಿಸಿದವು. ಮಾದಕ ವಸ್ತು ನಿಯಂತ್ರಣ ದಳದ ಬ್ರೆಕನ್ ಬ್ರಿಜ್ ಹಾಗೂ ಆತನ ಸಹೋದ್ಯೋಗಿ ಪಿಕೆನ್ಸ್ ಅವರುಗಳೇ ಕಾರುಭಾರ.

ಇವರು ಡ್ರಗ್‌ಗಳನ್ನು ನಿಯಂತ್ರಿಸುವುದು ಇರಲಿ, ಅಕ್ರಮವಾಗಿ ಡ್ರಗ್ಸ್ ಮಾರುತ್ತಾ ಇದ್ದವರಿಂದ ಹಫ್ತಾ ವಸೂಲಿಗೆ ಇಳಿದರು. ಹೊಸ ಹೊಸ ವ್ಯಾಪಾರಿಗಳನ್ನು ಪ್ರೋತ್ಸಾಹಿಸಿದರು. ಮಾರಿವಾನ್ ಎಂಬ ಮಾದಕ ವಸ್ತುವಿಗೆ ಭಾರೀ ಬೇಡಿಕೆ ಇದೆ ಎಂಬುದರಿತು, ತಾವೇ ಅದನ್ನು ತಂದು ವ್ಯಾಪಾರಿಗಳಿಗೆ ಪೂರೈಸಲಾರಂಭಿಸಿದರು.

ತಮ್ಮ ಈ ಅಕ್ರಮ ಬಯಲಾಗದಂತೆ, ತಾವೇನೋ ಮಹಾ ಕಡಿದು ಕಟ್ಟೆ ಹಾಕುತ್ತಾ ಇರುವವರಂತೆ ಯಾರ್ಯಾರನ್ನೋ ಬಂಧಿಸುತ್ತಾ ಇದ್ದರು. ಕೇಸು ಸಿಗದೇ ಹೋದರೆ, ತಾವೇ ವಶಪಡಿಸಿಕೊಂಡಿದ್ದ ಡ್ರಗ್‌ಗಳನ್ನು ಯಾರದೋ ಮನೆಯಲ್ಲೋ, ಅಂಗಡಿಯಲ್ಲೋ ತಾವೇ ಅವಿಸಿಟ್ಟು, ಆಮೇಲೆ ಅದನ್ನು ಪತ್ತೆ ಮಾಡುವ ನಾಟಕವಾಡಿ ಕಣ್ಣಿಗೆ ಮಣ್ಣೆರಚಿದರು. ಇದೆಲ್ಲ ಲ್ಯಾಂಗ್‌ಲೀ ಮೂಲಕ ಬ್ಯಾರೋಸ್‌ಗೆ ಸುದ್ದಿ ತಲುಪುತ್ತಿತ್ತು. ಇಂಥ ಎಲ್ಲ ಅಕ್ರಮಗಳಲ್ಲೂ ಸಹಜವಾಗಿ ಡೇವಿಸ್‌ಗೆ ಪಾಲಿರುತ್ತಾ ಇತ್ತು.

ಇನ್ನೊಂದೆಡೆ ಡೇವಿಸ್ ಸ್ವತಃ ವಸೂಲಿ ದಂಧೆಗೆ ಇಳಿದಿದ್ದ. ಊರಿನ ಚೌಕದಲ್ಲಿ ಹಣ್ಣಿನ ಅಂಗಡಿ ಇಟ್ಟುಕೊಂಡಿದ್ದ. ಬೆವರ್ಲಿ ಜೋ ರೋಡ್ಸ್ ಮತ್ತು ಆಕೆಯ ಗಂಡ ಜೇಮ್ಸ್ ಅವರನ್ನು ಭೇಟಿ ಮಾಡಿದ ಡೇವಿಸ್ ಹಣ ಗಳಿಸುವ ಉಪಾಯ ಒಂದನ್ನು ಸೂಚಿಸಿದ. ಊರಿನಲ್ಲಿ ಜಾಮೀನು ಬೇಕಾದವರು ಬಾಂಡ್ ನೀಡಬೇಕು. ಅಂಥ ಬಾಂಡ್‌ಗಳನ್ನು ಮಾಡುವ ಏಕೈಕ ಲೈಸೆನ್ಸ್ ಆ ದಂಪತಿಗಳಿಗೇ ನೀಡುವುದು. ಅವರು ಮಾರಾಟವಾದ ಬಾಂಡ್‌ನಲ್ಲಿ ಶೇಕಡಾ ಹತ್ತು ಪಾಲು ಪಡೆಯುತ್ತಾರೆ. ಅದರಲ್ಲಿ ಕಾಲು ಭಾಗ ತನಗೆ ನೀಡಬೇಕು ಎಂದ. ಅವರು ಒಪ್ಪಿದರು.

ಪ್ರತಿವಾರ ಸಂಗ್ರಹವಾದ ಹಣ ತಾನೇ ಖುದ್ದಾಗಿ ಹೋಗಿ ಪಡೆಯುತ್ತಾ ಇದ್ದ. ಹೋಗುವ ಮುಂಚೆ ಒಂದು ಫೋನ್ ಮಾಡುತ್ತಾ ಇದ್ದ ''ನನಗೆ ಪೀಚ್ ಹಣ್ಣುಗಳು ಬೇಕಿವೆ. ಅಂಗಡಿಗೆ ಬರುತ್ತೇನೆ'' ಹಾಗೆಂದರೆ ಬಂದಾಗ ದುಡ್ಡು ಸಿದ್ಧವಾಗಿ ಇಟ್ಟುಕೊಂಡಿರಿ ಎಂದರ್ಥ.

ಹಣ್ಣುಗಳನ್ನು ಪೇಪರ್ ಬ್ಯಾಗ್‌ನಲ್ಲಿ ತುಂಬಿಕೊಂಡು ಲೆಕ್ಕ ಕೊಡಲು ಎಂಬಂತೆ ಕ್ಯಾಷ್‌ನಲ್ಲಿ ಕುಳಿತ ಗಂಡ ಅಥವಾ ಹೆಂಡತಿ ಬಳಿಗೆ ಹೋಗುತ್ತಿದ್ದ. ಅವರು ಆಯಾ ವಾರದ ಪಾಲು ಅವನ ಹಣ್ಣಿನ ಬ್ಯಾಗ್‌ನಲ್ಲಿ ಇರಿಸುತ್ತಾ ಇದ್ದರು.

ಬ್ರೆಕೆನ್ ಬ್ರಿಜ್ ಮತ್ತು ಪೆಕಿನ್ಸ್ ದುರಾಸೆ ಮೇರೆ ಮೀರಿತ್ತು. ತನಿಖೆಗೆ ಬಂದಿದ್ದ ಗೂಢಚಾರರಲ್ಲಿ ಒಬ್ಬ ತಾನೇ ಡ್ರಗ್ಸ್ ಮಾಡುವವನಂತೆ ನಟಿಸಿ ಇಬ್ಬರನ್ನೂ ಬಂಧಿಸುವುದು ಸುಲಭವಾಯಿತು. ವಿಚಾರಣೆ ಆರಂಭವಾಯಿತು ಆದರೆ ಗೂಢಚಾರರ ತಂಡ ಡೇವಿಸ್ ತಂಟೆಗೆ ಮಾತ್ರ ಹೋಗಲಿಲ್ಲ. ಅವನನ್ನು ಸರಿಯಾದ ಸಾಕ್ಷಿ, ಪುರಾವೆಗಳೊಡನೆ ಹಿಡಿಯಬೇಕಿತ್ತು.

ಅಂಥ ದಿನವೂ ಬಂತು. ಹಣ್ಣಿನ ವ್ಯಾಪಾರಿಗಳಿಗೆ ಡೇವಿಸ್ ಸಂದೇಶ ಬಂತು. ಊರಾಚೆಯ ಒಂದು ನಿರ್ಜನ ಪ್ರದೇಶದಲ್ಲಿ ದುಡ್ಡು ತಲುಪಿಸಲು ಕೋರಿದ್ದ. ಅದೊಂದು ಪಾರ್ಕಿಂಗ್ ಪ್ರದೇಶ. ದುಡ್ಡು ಪಡೆದು ಆತ ಕಾರು ಸ್ಟಾರ್ಟ್ ಮಾಡಿ ಹೊರಟ ಗಳಿಗೆ ಬೆನ್ನಟ್ಟಿ ಬಂದಿದ್ದ ಗೂಢಚಾರರ ತಂಡ ಆತನನ್ನು ಹಣದ ಸಮೇತ ಬಂಧಿಸಿತು. ಕಾರಿನ ಒಳಗೆ ಆತ ರಚಿಸಿದ್ದ ದುಡ್ಡು ಇಡುವ ಗೂಡನ್ನು ಪತ್ತೆ ಮಾಡಬೇಕಾದರೆ ಇಡೀ ಕಾರನ್ನೋ ಕಿತ್ತು ಕಿತ್ತು ಶೋಧಿಸಬೇಕಾಯಿತು.

ನ್ಯಾಯಾಲಯದಲ್ಲಿ ತಪ್ಪೊಪ್ಪಿಕೊಂಡ ಡೇವಿಸ್‌ಗೆ 27 ತಿಂಗಳ ಶಿಕ್ಷೆ ವಿಧಿಸಲಾಯಿತು. ಬ್ರೆಕೆನ್ ಬ್ರಿಜ್ ಮಾತ್ರ ತಾನು ಗೆದ್ದೇ ಗೆಲ್ಲುವ ಉತ್ಸಾಹದಲ್ಲಿ ತಪ್ಪೊಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಕೊನೆಗೆ ಆತನ ಸಹೋದ್ಯೋಗಿ ಬಂಧಿತ ಪೆಕಿನ್ಸ್ ಮುಂತಾದವರೇ ಪ್ರಮುಖ ಸಾಕ್ಷಿಗಳಾದರು. ಆತ ತನ್ನ ಜೀವಮಾನವಿಡೀ ಈ ಜೈಲಿನಲ್ಲಿ ಕೊಳೆಯಬೇಕಿದೆ.

ನ್ಯಾಯಾಲಯದ ವಿಚಾರಣೆಯ ಪ್ರತಿ ವಿವರವನ್ನೂ ಡೆಮೊಕ್ರಾಟ್ ರಿಪೋರ್ಟರ್ ಉತ್ಸಾಹದಿಂದ ವರದಿ ಮಾಡಿತು. ತೀರ್ಪು ಹೊರಬಿದ್ದಾಗ ಅಂತಿಮ ವಿಜಯ ಪತ್ರಿಕೆಯದಾಗಿತ್ತು.

ಮೊದಲು ಮೊದಲು ಇದನ್ನೆಲ್ಲ ನಂಬಲು ಜನ ಸಿದ್ಧರಿರಲೇ ಇಲ್ಲ. ಕೊನೆಗೆ ನ್ಯಾಯಾಲಯ ತೀರ್ಪಿತ್ತ ಮೇಲೆ, ಜನರ ಒಲವು ಈಗ ಪತ್ರಿಕೆಗೆ ಮರಳಿದೆ. ಅದರ ಪ್ರಸಾರ ಸಂಖ್ಯೆ ಹೆಚ್ಚಿ ಹಾಗೇ ವಿಶ್ವಾಸಾರ್ಹತೆಗಳು ಮರಳಿವೆ.

- (ಸಂಗ್ರಹ : ರೀಡರ್ಸ್ ಡೈಜೆಸ್ಟ್‌ನಿಂದ)

BISILA BADUKU Kannada Monthly JUNE 2000 RNI No. 67406 / 97 Regd. CPMG /KA /BGW-59 / 2000



ಕೃಷ್ಣಾ ಮೇಲ್ದಂಡ ಅವ್ಯವಹಾರ: 6 ಎಂಜಿನಿಯರುಗಳ ಅಮಾನತು

ಕಾರಂಜಾ, ಇತರೆ ನೀರಾವರಿ ಯೋಜನೆಗಳಲ್ಲಿ ಭಾರೀ ಅವ್ಯವಹಾರ

ಅಧಿಕಾರಿಗಳ ವಿರುದ್ಧ ಕ್ರಿಮಿನಲ್ ದಾವೆ: ಎಚ್.ಕೆ

ಸರ್ಕಾರಿ ಖರ್ಚಿನಲ್ಲಿ ಮಂಚ, ಸೋಫಾ, ಸೈಟು ಖರೀದಿ!

ಲಂಚ: ಅಸಿಸ್ಟೆಂಟ್ ಕಮಿಷನರ್ ಕಚೇರಿ ವ್ಯವಸ್ಥಾಪಕರು ಲೋಕಾಯುಕ್ತ ಬಲೆಗೆ

ಅಧಿಕಾರಿಗಳಿಂದ ಪರಿಹಾರ ನಿಧಿಯ ದುರುಪಯೋಗ

ಲೋಕಾಯುಕ್ತ ಬಲೆಗೆ ಕೃಷಿ ಇಲಾಖೆ ಪ್ರಥಮ ದರ್ಜೆ ಸಹಾಯಕ

ಬೆಂಗಳೂರು, ಏ. 21
ಸೇವಾವಧಿಯಲ್ಲಿ ಮೃತಪಟ್ಟ ಸಹೋದ್ಯೋಗಿಯ ಪಿಂಚಣಿ ಅರ್ಜಿಯನ್ನು ವಿಲೇವಾರಿ ಮಾಡಲು 1 ಸಾವಿರ ರು. ಲಂಚ

ಜಡ್ಡು ಹಿಡಿದ ಅಧಿಕಾರಿಗಳು: ಮುಖ್ಯಮಂತ್ರಿ ವ್ಯಥೆ

ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಮನೆ ಮೇಲೆ ಲೋಕಾಯುಕ್ತ ದಾಳಿ

ಬೆಂಗಳೂರು, ಏ.18
ಲೋಕಾಯುಕ್ತ ನೌಕರ ಹೊಂದಿದ್ದ ಅಕ್ರಮ ಆಸ್ತಿ ಪತ್ತೆ

'ಪೊಲೀಸರೇ ಕಳ್ಳರ ಕೆಲಸ ಮಾಡಿದರೆ ಜನಸಾಮಾನ್ಯರನ್ನು ರಕ್ಷಿಸುವವರು ಯಾರು?'

ದೂರದರ್ಶನ ಅಧಿಕಾರಿಗಳ ಮನೆ, ಕಚೇರಿ ಮೇಲೆ ಸಿ.ಬಿ.ಐ. ದಾಳಿ

20 ಕಡೆ ಏಕಕಾಲ ಕಾರ್ಯಾಚರಣೆ

ಬೆಂಗಳೂರು, ಮೇ 17
ದೂರದರ್ಶನ ಕೇಂದ್ರದ ಕೆಲ ಹಿರಿಯ ಅಧಿಕಾರಿ ...

... ಆದರೆ, ದಾಳಿ ಸಂಬಂಧ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ.
ಸಿಬಿಐನ ಹಿರಿಯ ಅಧಿಕಾರಿಯೊಬ್ಬರ ಪ್ರಕಾರ, ಬೆಂಗಳೂರಿನಲ್ಲಿ 6 ಕಡೆ ಮತ್ತು ಸಿಕಂದರಾಬಾದ್, ಪಾಂಡಿಚೇರಿ, ಮದ್ರಾಸ್, ... 20 ಕಡೆ ಈ ದಾಳಿ ನಡೆದಿದೆ.

ಬಾಗಲಕೋಟೆ, ಬೆಳಗಾವಿಯಲ್ಲಿ ಲೋಕಾಯುಕ್ತ ದಾಳಿ

ಅಧಿಕಾರಿಗಳ 2 ಕೋಟಿ ರೂ. ಬೆಲೆ ಅಕ್ರಮ ಆಸ್ತಿ ವಶ

ಬೆಂಗಳೂರು, ಏ. 24- ಬಾಗಲಕೋಟೆ, ಬೆಳಗಾವಿಯಲ್ಲಿ ದಾಳಿ ನಡೆಸಿರುವ ಲೋಕಾಯುಕ್ತ ಪೊಲೀಸರು ಅಧಿಕಾರಿಗಳು ಸಂಗ್ರಹಿಸಿದ್ದ ಎರಡು ಕೋಟಿಗೂ ಅಧಿಕ ಅಕ್ರಮ ಆಸ್ತಿಪಾಸ್ತಿಗಳನ್ನು ವಶಕ್ಕೆ ತೆಗೆದುಕೊಂಡಿದ್ದಾರೆ.

ಬೆಳಗಾವಿಯ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದ ಕಾರ್ಯನಿರ್ವಾಹಕ ಎಂಜಿನಿಯರ್ ಮನೆ ಹಾಗೂ ಕಚೇರಿ ಮೇಲೆ ಏಕ ... ದಾಳಿ ನಡೆಸಿದ ಪೊಲೀಸರು 1.10 ... ಕೋಟಿ ರೂ. ಅಕ್ರಮ ಆಸ್ತಿಯನ್ನು ಪತ್ತೆಹಚ್ಚಿದ್ದಾರೆ.

ಎಂಜಿನಿಯರ್‌ಗೆ ಸೇರಿದ ಮನೆಗಳು, ... ವಸ್ತುಗಳು, ಬ್ಯಾಂಕ್ ಬ್ಯಾಲೆನ್ಸ್, ಷೇರು ... ಹಾಗೂ ವ್ಯವಸಾಯ ಉಪಕರಣಗಳನ್ನು ... ತೆಗೆದುಕೊಳ್ಳಲಾಗಿದೆ.

ಬಾಗಲಕೋಟೆಯ ಲೋಕಾಯುಕ್ತ ಪೊಲೀಸರು, ಮುಧೋಳದ ಅಬ್ಕಾರಿ ಅಧಿಕಾರಿ ... ಮನೆ ಹಾಗೂ ಕಚೇರಿ ಮೇಲೆ ದಾಳಿ ನಡೆಸಿ ... 90.44 ಲಕ್ಷ ರೂ. ಬೆಲೆಯ ಅಕ್ರಮ ... ಯನ್ನು ಪತ್ತೆಹಚ್ಚಿದ್ದಾರೆ. ಈ ಅಧಿಕಾರಿಗೆ ... ದ್ದನ್ನಲಾದ ಚರ ಹಾಗೂ ಸ್ಥಿರ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಮೇಲ್ಕಂಡ ಎರಡೂ ಪ್ರಕರಣಗಳಿಗೆ ಸಂಬಂಧಿಸಿದಂತೆ, ಅಧಿಕಾರಿಗಳನ್ನು ...